॥ ಶ್ರೀ : ॥

# ಸೀತಾ—ರಾಮ

## ೧. ಆದಿಕಾಂಡ

ಇದು ಬಹಳ ಹಿಂದಿನ ಕಾಲದ ಕಥೆ. ಆ ಕಾಲಕ್ಕೆ 'ತ್ರೇತಾಯುಗ' ಎನ್ನುತ್ತಾರೆ. ಆಗ ಈ ದೇಶದಲ್ಲಿ ಅಯೋಧ್ಯೆ ಎಂಬುವ ರಾಜ್ಯವು ಇದ್ದಿತು. ಅದನ್ನು ದಶರಥರಾಯನು ಆಳುತಿದ್ದನು. ಅವನ ರಾಜಧಾನಿ, ಅಯೋಧ್ಯೆ; ಸಮೀಪದಲ್ಲಿ ಹರಿಯುತಿದ್ದ ಹೊಳೆ, ಸರಯೂನದಿ. ದಶರಥನು ಪ್ರಜೆಗಳನ್ನು ಮಕ್ಕಳಂತೆಯೆ ಪ್ರೀತಿಯಿಂದ ಪಾಲಿಸುತಿದ್ದನು. ಅವನ ಆಳಿಕೆಯಲ್ಲಿ ಜನರೊಳಗೆ ವಾದವಿವಾದಗಳು ಇದ್ದಿಲ್ಲ; ರೋಗರುಜೆಗಳು ಸುಳಿಯುತಿದ್ದಿಲ್ಲ; ಕಳ್ಳಕಾಕರ ಭಯವಿದ್ದಿಲ್ಲ. ಜನರಿಗೆ ಯಾವಾಗಲೂ ಸುಖವೇ, ಸೌಖ್ಯವೇ.

ದಶರಥನ ವಯಸ್ಸು ಮೂವತ್ತು ವರ್ಷವಾದ ಬಳಿಕ ಅವನು ಕೌಸಲ್ಯೆಯನ್ನು ಮದುವೆಯಾದನು. ಅವಳು ಕೋಸಲದೇಶದ ಅರಸನ ಮಗಳು. ಅವಳು ಚೆಲುವೆ, ಗುಣವತಿ. ಅವಳೇ ಅವನಿಗೆ ಪಟ್ಟದ ರಾಣಿಯಾಗಿದ್ದಳು. ಅವಳ ಹೊರತಾಗಿ, ಇನ್ನಿಬ್ಬರು ರಾಣಿಯರು ಇದ್ದರು. ಒಬ್ಬಳು ಗಿರಿಜಾಪುರದ ಅರಸನ ಮಗಳಾದ ಕೈಕಯೀ (ಕೈಕೆ); ಇವಳು ದಶರಥನನ್ನು ಸ್ವಯಂವರಕಾಲದಲ್ಲಿ ವರಿಸಿಕೊಂಡಳು. ಮತ್ತೊಬ್ಬಳು ಸಿಂಹಲರಾಜನ ಕನ್ಯೆ,—ಸೌಮಿತ್ರಿ.

ಈ ಮೂವರೂ ರಾಣಿಗಳಲ್ಲಿ ಬಹುಕಾಲದ ವರೆಗೆ ಸಂತತಿ ಹುಟ್ಟಲಿಲ್ಲ. ಇದೊಂದು ಕಾರಣದಿಂದ ರಾಜನಿಗೆ ದುಃಖವಿದ್ದಿತು. ಈ

ದುಃಖವನ್ನು ದೂರಮಾಡುವುದಕ್ಕೆ ಉಪಾಯವೇನೆಂದು ಅವನು ತನ್ನ ಪುರೋಹಿತನಾದ ವಸಿಷ್ಠನನ್ನು ಕೇಳಿದನು. ಅವನು ಹೇಳಿಕೊಟ್ಟಂತೆ, ಋಷ್ಯಶೃಂಗನೆಂಬ ಮುನಿಕುಮಾರನನ್ನು ಊರಿಗೆ ಕರೆತರಿಸಿ, ಅವನಿಂದ ಒಂದು ಯಾಗವನ್ನು ಮಾಡಿಸಿದನು. ಆ ಯಾಗದ ಸಂಭ್ರಮವನ್ನು ನೋಡಲು ನಾನಾ ದೇಶಗಳಿಂದ ಬಹು ಮಂದಿ ರಾಜರುಗಳೂ ಋಷಿಗಳೂ ಬಂದರು. ಅವರೆಲ್ಲರನ್ನು ರಾಜನೂ ರಾಣಿಯರೂ ಚೆನ್ನಾಗಿ ಉಪಚರಿಸಿದರು. ಯಾಗದ ಪ್ರಸಾದವನ್ನು ಅವನು ರಾಣಿಯರೊಳಗೆ ಹಂಚಿಕೊಟ್ಟನು. ಭಾರತಭೂಮಿಯು ರತ್ನಗಳನ್ನು ಭೂಗರ್ಭದಲ್ಲಿ ಧರಿಸಿದಂತೆ, ಇವರು ಪುತ್ರರತ್ನಗಳನ್ನು ತಮ್ಮ ಉದರಗಳಲ್ಲಿ ತಳೆದರು.

ಕೆಲವು ದಿನಗಳ ತರುವಾಯ, ರಾಣಿಗಳು ನಾನಾ ಬಗೆಯ ಸ್ವಪ್ನಗಳನ್ನು ಕಂಡರು. ದೇವತೆಗಳಂತೆ ಕಾಣುವ ಪುಟ್ಟಕೂಸುಗಳು ತಮ್ಮ ಮಗ್ಗುಲಲ್ಲಿ ಮಲಗಿರುವಂತೆಯೂ, ಲಕ್ಷ್ಮಿಯು ತಾವರೆಯ ಎಲೆಗಳಿಂದ ಅವರಿಗೆ ಗಾಳಿ ಬೀಸುತಿದ್ದಂತೆಯೂ ರಾಣಿಯರು ಕನಸುಕಂಡರು. ಅನಂತರ ಕೌಸಲ್ಯೆಯಲ್ಲಿ ರಾಮಚಂದ್ರನೂ, ಕೈಕಯಿಯಲ್ಲಿ ಭರತನೂ, ಸೌಮಿತ್ರೆಯಲ್ಲಿ ಲಕ್ಷ್ಮಣ, ಶತ್ರುಘ್ನ ಎಂಬಿಬ್ಬರೂ ಹುಟ್ಟಿದರು. ದಶರಥನು ಆಗ ಅತಿ ಸಂತೋಷ ತಳೆದನು. ಆಗಲೆ ಲಕ್ಷ ಲಕ್ಷ ಬ್ರಾಹ್ಮಣರಿಗೆ ಕೋಟಿ ಕೋಟಿ ಚಿನ್ನದ ಮೊಹರುಗಳನ್ನು ದಾನವಾಗಿ ಕೊಟ್ಟನು. ಪ್ರತಿ ಒಬ್ಬನಿಗೂ ಉಡುಗೊರೆಗಳನ್ನು ಹಂಚಿದನು. ಊರಲ್ಲೆಲ್ಲ ದೀಪಾವಳಿ ಬೆಳಗಿಸಿದನು. ಜನರು ಮೆರವಣಿಗೆಗಳಲ್ಲಿ ಮೆರೆದರು. ನಾನಾ ದೇಶಗಳ ದೀನರೂ ಬಡವರೂ ಅವನಲ್ಲಿಗೆ ಬಂದು ಬೇಕಾದಷ್ಟು ಹಣವನ್ನು ಉಚಿತವಾಗಿ ಪಡೆದರು. ಮಕ್ಕಳು ಹುಟ್ಟಿದುವೆಂದು, ಬಾಲಚಂದ್ರನನ್ನು ಕಂಡ ಸಾಗರದಂತೆ, ಅವನು ಉಲ್ಲಾಸ ಹೊಂದಿದನು; ಜನರೂ ಆನಂದಪಡೆದರು.

ದಶರಥನಿಗೆ ಮಕ್ಕಳ ಮೇಲೆ ಮಮತೆ ಬಹಳವಾಗಿದ್ದಿತು. ಅವನಿಗೆ ಅವರನ್ನು ಕಂಡಷ್ಟೂ ಕಡಿಮೆಯೇ. ಅವರಿಗೆ ಸುಖವಾಗಲೆಂದೇ ಅವನ ಪ್ರಯಾಸವು. ಮಕ್ಕಳೆಂದರೆ ಅಂತಹವೇ ಇರಬೇಕು. ಎಷ್ಟು ಸುಂದರವಾಗಿದ್ದುವು! ವಿಷ್ಣುವಿನ ಚಿಕ್ಕ ಪ್ರತಿಮೆಗಳೊ ಎಂಬಂತಿದ್ದುವು. ಅವರನ್ನು ಯಾರು ಕಂಡರೂ ಮೋಹಿಸುವರು. ಅವರನ್ನು ಕಾಣುವುದೇ ಕಣ್ಣಿಗೆ

ಹಬ್ಬವು. ಅವರು ನಾಲ್ವರೂ, ಒಬ್ಬರನ್ನೊಬ್ಬರು ಬಿಟ್ಟು ಇರುತಿರಲಿಲ್ಲ. ಒಟ್ಟಾಗಿ ಆಡುವರು; ಒಟ್ಟಾಗಿ ತಿರುಗುವರು. ಅವರೊಳಗೆ ಎಂದೂ ಜಗಳ ಹುಟ್ಟುತಿರಲಿಲ್ಲ. ಯಾವಾಗಲೂ ನಾಲ್ವರೂ ನಗುತಲೇ ಇರುವರು. ಇವರು ನಗುವುದನ್ನು ಕಂಡು, ರಾಜನೂ ರಾಣಿಯರೂ ಸಂತೋಷದಿಂದ ನಗುತಲಿದ್ದರು. ಚಿಕ್ಕಮಕ್ಕಳಾದರೂ, ಆಳು—ತೊತ್ತುಗಳಿಗೂ, ಕಹಿ ಮಾತುಗಳನ್ನು ಆಡುತಿರಲಿಲ್ಲ. ಇಡೀ ರಾಜ್ಯವು ಇಂತಹ ಮಕ್ಕಳನ್ನು ಮುದ್ದಾಡದೆ ಹೇಗಿರಬಹುದು?

ಮಕ್ಕಳಿಗೆ ಐದು ವರ್ಷ ತುಂಬುತ್ತಲೆ, ರಾಜನು ಅವರಿಗೆ ಅಕ್ಷರಾಭ್ಯಾಸವನ್ನು ಮಾಡಿಸಿದನು. ರಾಜನ ಮಕ್ಕಳೆಂದು ಅವರನ್ನು ಪೂಜೆಗೆ ಕುಳ್ಳಿರಿಸಲಿಲ್ಲ. ಬೋಧಕನು ಸಾಮಾನ್ಯನಲ್ಲ,—ವಸಿಷ್ಠದೇವನು. ವಸಿಷ್ಠನು ಅವರಿಗೆ 'ಅ—ಆ' ಕಲಿಸತೊಡಗಿದನು. ಅಲ್ಲಿಂದ ಮುಂದರಿಸಿ, ಅವನು ಕಾವ್ಯ, ವ್ಯಾಕರಣ, ವೇದ, ವೇದಾಂಗ ಎಲ್ಲವನ್ನೂ ಅವರಿಗೆ ಕಲಿಸಿದನು. ಓದುಬರಹ, ವೇದಶಾಸ್ತ್ರ ಮಾತ್ರವೆ ಅವನು ಕಲಿಸಿದುದಲ್ಲ; ಮಕ್ಕಳಿಗೆ ಯೋಗ್ಯರೀತಿಯಲ್ಲಿ ಅಂಗಸಾಧನೆಯನ್ನೂ ಕಲಿಸಿದನು. ಅರಸು ಮಕ್ಕಳಾದರೂ ತೀರ ಬೆಳಗ್ಗೆ ಏಳುವರು; ಕೈಬಾಯಿ ತೊಳೆದುಕೊಂಡು ವ್ಯಾಯಾಮ ಮಾಡುವರು. ಅನಂತರ ಅವರು ಯುದ್ಧಮಾಡಲೂ ಕಲಿತುಕೊಂಡರು. ಇವರೊಳಗೆ ರಾಮಚಂದ್ರನು ಬಲುಗಟ್ಟಿಗನಾದನು; ಅವನ ಬಾಣಗಳು ಹುಸಿಯಾಗುತಿರಲಿಲ್ಲ; ಅವನು ಬಿಟ್ಟ ಪ್ರತಿಯೊಂದು ಬಾಣವು ಗುರಿಮುಟ್ಟುತಿದ್ದಿತು. ಕ್ರಮೇಣ ಅವರು ದೊಡ್ಡ ವೀರರಾದರು. ಆ ಕಾಲದಲ್ಲಿ ರಾಕ್ಷಸರ ಬಾಧೆಯು ಹೆಚ್ಚಾಗಿದ್ದಿತು. ದಶರಥರಾಯನಿಗೆ ಹಗೆಗಳೂ ಇದ್ದರು. ಇವರೆಲ್ಲರು ರಾಮನ ಬಾಣಗಳಿಗೆ ಭಯಪಡುತಿದ್ದರು. ಹಗೆಗಳ ತಂಟೆಯೂ ರಾಕ್ಷಸರ ಬಾಧೆಯೂ ಈ ವೀರ ಬಾಲಕರ ದೆಸೆಯಿಂದ ರಾಜ್ಯದಲ್ಲಿ ಕಡಿಮೆಯಾದುವು. ರಾಜನ ನಾಲ್ವರು ಕುಮಾರರು ಅವನ ಮನೆತನಕ್ಕೆ ನಾಲ್ಕು ವಜ್ರದ ಕಂಬಗಳಂತಾದರು.

ಒಂದು ದಿನ ರಾಮಲಕ್ಷ್ಮಣರು ಜಿಂಕೆಗಳನ್ನು ಬೇಟೆಯಾಡಲು ತೆರಳಿದರು. ಕೆಲವು ವನಗಳಲ್ಲಿ ತಿರುಗಿದರು. ಜಿಂಕೆ ಸಿಗಲಿಲ್ಲ. ಒಂದು ಕಾಡಿನಲ್ಲಿ ಮಾರೀಚನೆಂಬ ರಾಕ್ಷಸನು ಇದ್ದನು. ಅವನಿಗೆ ಮನುಷ್ಯರನ್ನು

ತಿನ್ನುವುದೆಂದರೆ ಬಹಳ ಪ್ರೀತಿ. ರಾಕ್ಷಸರೆಲ್ಲರೂ ಮಾಂಸತಿನ್ನುವವರು; ಅವರು ಕಾಡುಜನರು, ಬಹು ಕ್ರೂರರು. ಮಾರೀಚನು ಬಲು ದುಷ್ಟನು; ಅವನ ಭಯದಿಂದ ಯಾರೂ ಆ ವನಕ್ಕೆ ಬರುತ್ತಿರಲಿಲ್ಲ. ಅವನು ಹರಿಣ ರೂಪವನ್ನು ಧರಿಸಿಕೊಂಡು ರಾಮನಿಗೆ ಇದಿರಾಗಿ ಬೇಕೆಂದೇ ಕುಣಿದನು. ರಾಮನೂ ಹರಿಣವನ್ನೇ ಕಾದಿದ್ದನು. ಅವನು ಆ ಹರಿಣವನ್ನು ಕೊಲ್ಲು ವುದಕ್ಕೆಂದು ಬಾಣಹೂಡಿದನು. ಬಾಣವನ್ನು ಕಂಡ ಬಳಿಕ, ಹರಿಣವು ಅಲ್ಲಿ ನಿಲ್ಲುವುದೆ? ದಿಗಿಲುಗೊಂಡು ಓಡಿತು. ವನದ ಆಚೆಗೆ ಇರುವ ಜನಕನ ರಾಜ್ಯಕ್ಕೆ ಪಲಾಯನ ಮಾಡಿತು. ಆಗ ಸಂಜೆಯಾಗುತ್ತ ಬಂದಿತು. ಲಕ್ಷ್ಮಣನು ಚೆನ್ನಾಗಿ ದಣಿದಿದ್ದನು. ಮುಂದೆ ನಡೆಯಲಾರದೆ, ನಿಂತಲ್ಲಿಯೆ ಕುಳಿತುಕೊಂಡನು. ರಾಮನು ಅವನಿಗೆ ಸಮಾಧಾನ ಮಾಡಿದನು. 'ಒಂದು ದಿನದಲ್ಲಿಯೆ ಈ ರೀತಿ ದಣುವಾಗಿ ಸೋತರೆ, ಮುಂದೆ ಹೇಗಾಗು ವುದು? ಇಂತಹ ರಾಕ್ಷಸರು ಬಹುಮಂದಿ ಇರುವರು. ಅವರನ್ನು ಕೊಲ್ಲ ಬೇಡವೆ?' ಎಂದನು. ಆದರೂ, ತಮ್ಮನು ಬಳಲಿದನೆಂದು ತಾನೂ ಕಳವಳ ಪಟ್ಟನು. ಬೇಗನೆ ದೂರದಿಂದ ಇಷ್ಟು ನೀರನ್ನು ತಂದು ತಮ್ಮನಿಗೆ ಕುಡಿಯು ಕೊಟ್ಟನು. ತಿನ್ನುವುದಕ್ಕೆ ಗೆಡ್ಡೆಗೆಣಸುಗಳನ್ನು ತಂದುಕೊಟ್ಟನು. ಲಕ್ಷ್ಮ ಣನು ಸ್ವಲ್ಪ ಹೊತ್ತು ನಿದ್ದೆಹೋದನು. ಬಳಿಕ ಎದ್ದು ರಾಮನೊಡನೆ ಊರಿಗೆ ಮರಳಿದನು.

ಆಗ ಊರಿನಲ್ಲಿ ಕತ್ತಲು ಕವಿದೇ ಇದ್ದಿತು. ರಾಮಲಕ್ಷ್ಮಣರು ಅಯೋಧ್ಯೆಯಲ್ಲಿ ಇದ್ದಿಲ್ಲವೆಂದು ಬಹಳ ಗಲಿಬಿಲಿ ಉಂಟಾಗಿದ್ದಿತು. ಅವರು ಎಲ್ಲಿದ್ದಾರೆಂದು ಈ ಮನೆ, ಆ ಹಿತ್ತಿಲು, ಈಚೆಯ ಓಣಿ, ಆಚೆಯ ಕೇರಿ, ಎಲ್ಲೆಲ್ಲಿಯೂ ಹುಡುಕಿದರು. ಆದರೆ ಅವರಿಬ್ಬರು ಇಲ್ಲ. ಅರಸನು ದುಃಖದಿಂದ ಸತ್ತವನಂತೆ ಬಿದ್ದನು; ರಾಣಿಯರು ಅತ್ತು ಅತ್ತು ಬೇಸತ್ತರು. ಊರ ಜನರು ಗಾಬರಿಗೊಂಡು ಗೋಳಾಡಿದರು. ಅಷ್ಟರಲ್ಲಿ ರಾಮ ಲಕ್ಷ್ಮಣರು ಇಬ್ಬರೂ ಅಲ್ಲೇ ಬಂದು ನಿಂದರು. ಭರತ ಶತ್ರುಘ್ನರು ಅವರನ್ನು ಆಲಿಂಗಿಸಿದರು. ಅವರನ್ನು ರಾಜ—ರಾಣಿಯರ ಬಳಿಗೆ ಕರೆದು ತಂದರು. ಹೋದ ಉಸಿರನ್ನು ಎಲ್ಲರು ಮರಳಿ ಆಗ ಪಡೆದರು. ಎಲ್ಲರೂ ಅವರನ್ನು ಮುದ್ದಾಡಿದರು. ದಶರಥನು,—'ಇನ್ನು ಬೇಡಪ್ಪಾ, ಈ ರೀತಿ

ಕಾಡಿಗೆ ಹೋಗಬಾರದು. ರಾಕ್ಷಸರು ಇದ್ದಾರೆ. ಮೋಸವಾದೀತು!' ಎಂದು ಅವರಿಗೆ ಬುದ್ಧಿ ಹೇಳುತ್ತ ತಬ್ಬಿಕೊಂಡನು.

ಇದಾದ ಕೆಲವು ಕಾಲದ ಬಳಿಕ ಒಂದು ದಿನ ಅಮಾವಾಸ್ಯೆ; ಎಲ್ಲರೂ ಅಂದು ಗಂಗಾಸ್ನಾನಕ್ಕೆ ಹೋಗುವರು. ಪುಣ್ಯಕಾಲವಲ್ಲವೆ? ಲಕ್ಷಾವಧಿ ಜನರು ಗಂಗೆಯ ಕಡೆಗೆ ತೆರಳಿದರು. ರಾಜನೂ ತನ್ನ ಮಕ್ಕಳೊಡನೆ ಅತ್ತ ನಡೆದನು. ರಾಜನು ಪ್ರಯಾಣಮಾಡುವುದೆಂದರೆ ನಾವು ನೀವು ಹೋಗುವಂತೆ ಅಲ್ಲ. ಅವನ ಸಂಗಡಲೆ ಸೈನ್ಯವೆಷ್ಟು, ಸಾಮಂತರೆಷ್ಟು, ಆಳುಗಳೆಷ್ಟು! ಅಸ್ತ್ರ-ಶಸ್ತ್ರಗಳೂ ಎಷ್ಟು! ಸಮುದ್ರವು ಸಮೀಪವೇ? ಹೋದಷ್ಟು ಇನ್ನೂ ಇದೆ. ದಾರಿಯೂ ಸರಿಯಿಲ್ಲ. ಕಾಡು, ಗುಡ್ಡ, ಹೊಳೆ ಮುಂತಾದುವನ್ನು ದಾಟಿ ನಡೆಯಬೇಕು. ಇದ್ದ ಒಂದು ಹೆದ್ದಾರಿಯು ಗುಹಕನೆಂಬುವ ರಾಜನ ಊರೊಳಗಿಂದ ನೀಡಿದ್ದಿತು. ಗುಹಕನು ಜಾತಿಯಲ್ಲಿ ಚಂಡಾಲನು; ಆದರೆ ನೀತಿಯಲ್ಲಿ ಧಾರ್ಮಿಕನು. ಅವನು ಮಹಾವೀರನು. ದಶರಥನು ಅದೇ ಮಾರ್ಗವಾಗಿ ಮುಂದಕ್ಕೆ ನಡೆದನು. ಸ್ವಲ್ಪ ದೂರಕ್ಕೆ ಹೋಗುವುದರೊಳಗೆ ಆ ಚಂಡಾಲರಾಜನಾದ ಗುಹಕನು ಅವನ ದಾರಿ ಕಟ್ಟಿದನು. ಅವನ ಪರಾಕ್ರಮವೇನು! ಹೇಗೆ ಕಾದಿದನು! ಅವನ ಸಂಗಡಲೆ ಸಾವಿರಾರು ಚಂಡಾಲರೂ ಬಂದು ಯುದ್ಧಮಾಡಿದರು. ದಶರಥರಾಯನೂ ಕಡಿಮೆ ವೀರನಲ್ಲ, ಅವನೂ ಸಾಹಸಿಯಲ್ಲವೆ? ಚಂಡಾಲನನ್ನು ಸುಲಭದಲ್ಲಿ ಬಿಡುವನೆ? ಯುದ್ಧವು ಚೆನ್ನಾಗಿ ನಡೆಯಿತು. ದಶರಥರಾಯನೆ ಗೆದ್ದನು. ಅವನು ಗುಹಕನ ಕೈಕಾಲುಗಳನ್ನು ಸಂಕೋಲೆಗಳಿಂದ ಬಿಗಿಯಿಸಿ, ತನ್ನ ರಥದ ಹಲಗೆಗೆ ಕಟ್ಟಿಸಿದನು.

ರಾಮನು ಗುಹಕನ ವೀರತ್ವವನ್ನು ನೋಡಿದನು. ರಾಮನೂ ವೀರನು; ಅದು ಕಾರಣವೆ ಅವನು ಇತರ ವೀರರನ್ನು ಮೆಚ್ಚುವವನು. ಅವನು ಗುಹಕನನ್ನು ಹೊಗಳಿದನು. ಅವನನ್ನು ಸೆರೆಬಿಡಿಸಬೇಕೆಂದು ರಾಮನ ಇಚ್ಛೆ. ಆ ವೀರನ ಸಂಕಟವನ್ನು ನೋಡುವುದಕ್ಕೂ ಆಗುವುದಿಲ್ಲ; ತಂದೆಯ ಮನಸ್ಸನ್ನು ನೋಯಿಸುವುದಕ್ಕೂ ಆಗುವುದಿಲ್ಲ. ಕೊನೆಗೆ, ತಂದೆಯನ್ನು ಬೇಡಿಕೊಂಡು, ಸಂಕೋಲೆ ಕಡಿದು, ಗುಹಕನನ್ನು ತನ್ನ ಜತೆಯಲ್ಲಿಯೆ ಮರ್ಯಾದೆಯಿಂದ ಕುಳ್ಳಿರಿಸಿಕೊಂಡನು. ಗುಹಕನ

ಬೇಸರವನ್ನು ಹೋಗಲಾಡಿಸುವುದಕ್ಕೆ ನಾನಾ ವಿನೋದದ ಮಾತುಗಳನ್ನು ರಾಮನು ಅವನೊಡನೆ ಆಡಿದನು.

ಗುಹಕನು ರಾಮಚಂದ್ರನ ನಡೆನುಡಿಗಳಿಗೆ ಮೆಚ್ಚಿದನು. ಅವನ ಕಾಲಿಗೆ ಬಿದ್ದು, 'ನಾನು ಉಪಕಾರವನ್ನು ಮರೆಯುವುದಿಲ್ಲ' ಎಂದನು. ವೀರನೇ ವೀರನಿಗೆ ಗೆಳೆಯನು. ರಾಮಚಂದ್ರನು ಗುಹಕನನ್ನು ತನ್ನ ಗೆಳೆಯನನ್ನಾಗಿ ಮಾಡಿಕೊಂಡನು. ಚಂಡಾಲನಿಗೆ ರಾಜಪುತ್ರನು ಗೆಳೆಯನೆಂದರೆ, ಜನರಿಗೆ ಆಶ್ಚರ್ಯವಾಗದೆ? ಆದರೆ, ವೀರರು ಜಾತಿಯನ್ನು ನೋಡುವವರಲ್ಲ.

ಸರಿ. ಮುಂದೆ ಗಂಗಾಸ್ನಾನವಾಯಿತು. ಸೂರ್ಯಗ್ರಹಣವೂ ಕಳೆಯಿತು. ರಾಜನು ಎಷ್ಟೋ ಜನರಿಗೆ ಹಣವನ್ನು ದಾನವಾಗಿ ಕೊಟ್ಟನು; ನಂತರ, ಅದೇ ದಾರಿಯಾಗಿ ತನ್ನ ಊರಿಗೆ ಮರಳಿದನು.

ಇನ್ನು ದಶರಥರಾಯನ ರಾಜ್ಯದಲ್ಲಿ ರಾಕ್ಷಸರ ಭಯವಿಲ್ಲ. ರಾಮನ ಬಾಣಗಳಿಗೆ ಬೆದರಿ, ರಾಕ್ಷಸರು ಆ ರಾಜ್ಯದಿಂದ ಹೊರಗಾಗಿರುವರು; ಅವನ ರಾಜ್ಯದೊಳಕ್ಕೆ ಇಣಿಕಿಯೂ ನೋಡುವುದಿಲ್ಲ, ಅಷ್ಟು ಭಯ! ಅವರೇನು ಮಾಡಿದರು? ಸುತ್ತಲಿನ ರಾಜ್ಯಗಳಿಗೆ ಹೋಗಿ, ಅಲ್ಲಿ ಉಪದ್ರ ಕೊಡಲು ಪ್ರಾರಂಭಿಸಿದರು. ಇವರೊಳಗೆ ಮಾರೀಚನೆ ಮೊದಲನೆಯವನು. ಅವನು ಅಂದೇ ಜನಕನ ರಾಜ್ಯವಾದ ಮಿಥಿಲೆಗೆ ಹೋಗಿದ್ದನಷ್ಟೆ. ಅವನ ಕಾಟವು ಅಲ್ಲಿ ಬಹಳವಾಯಿತು. ಅದರಿಂದ ಬ್ರಾಹ್ಮಣರು ಯಜ್ಞಮಾಡಲಾರದಾದರು; ಅವರು ಯಜ್ಞ ಆರಂಭಿಸಿದರೆ ರಾಕ್ಷಸರು ಅಗ್ನಿಕುಂಡದಲ್ಲಿ ರಕ್ತವನ್ನು ಸುರಿಯುವರು. ಇವರ ತಾಪದಿಂದ ತಮ್ಮ ತಮ್ಮ ಧರ್ಮದಂತೆ ಯಾರಿಗೂ ನಡೆಯಲಾಗಲಿಲ್ಲ.

ರಾಜ್ಯದಲ್ಲಿ ಹೀಗಾದರೆ ರಾಜನಿಗೆ ಚಿಂತೆ ಹಿಡಿಯದೇ? ಜನರಿಗೆ ರಾಕ್ಷಸರು ಕೊಡುವ ಬಾಧೆಯನ್ನು ನೋಡಿ ಸುಮ್ಮನಿರಲಾಗುವುದೇ? ಅವನು ತನ್ನಿಂದಾಗುವಷ್ಟು ಸಾಧನೆ ಮಾಡಿದನು. ಆದರೂ, ರಾಕ್ಷಸರ ಹಾವಳಿ ಕಡಿಮೆಯಾಗಲಿಲ್ಲ. ಯಜ್ಞವೂ ಆಗುವ ಉಪಾಯವಿಲ್ಲ. ಯಜ್ಞವಾಗದಿದ್ದರೆ ರಾಜ್ಯಕ್ಕೆ ಕೇಡು, ರಾಜನಿಗೆ ಕೇಡು, ಪ್ರಜೆಗಳಿಗೆ ಕೇಡು,

ಇನ್ನು ಉಪಾಯವೇನು? ರಾಜನು ಬುದ್ಧಿವಂತರನ್ನು ದೊಡ್ಡದೊಂದು ಸಭೆಗೆ ಕರೆಯಿಸಿದನು. ಅವರು ಹಲವು ಬಗೆಯ ಉಪಾಯಗಳನ್ನು ಹೇಳಿದರು. ಅಲ್ಲಿ ವಿಶ್ವಾಮಿತ್ರನೂ ಇದ್ದನು. 'ರಾಕ್ಷಸರನ್ನು ಅಣಗಿಸುವ ಮನುಷ್ಯನು ದೊರೆಯುವುದಿಲ್ಲವೇ? ಅವನು ಅಂತಹ ವೀರನಾಗಬೇಕು, ಇಲ್ಲದಿದ್ದಲ್ಲಿ ಹೇಗೆ ತಾನೆ ರಾಕ್ಷಸರನ್ನು ಗೆಲ್ಲುವನು? ಅಯೋಧ್ಯೆಯ ಅರಸುಮಗನಾದ ರಾಮಚಂದ್ರನನ್ನೇ ಇತ್ತ ಕರೆಯಿಸಿದರೆ, ಅವನು ನಿಶ್ಚಯವಾಗಿ ರಾಕ್ಷಸರನ್ನು ನಾಶಮಾಡುವನು ಎಂದು ನನಗೆ ತೋರುತ್ತಿದೆ.' ಎಂದು ವಿಶ್ವಾಮಿತ್ರನು ಸಭೆಯಲ್ಲಿ ಜನಕ ಮಹಾರಾಯನಿಗೆ ಸೂಚಿಸಿದನು. ಅವನ ಮಾತನ್ನೆ ಎಲ್ಲ ಮುನಿಗಳು ಸರಿಯೆಂದರು.

ರಾಮಚಂದ್ರನನ್ನು ಕರೆದುತರಲು ಯಾರು ಹೋಗುವರು? ಅಂತಿಂತವರು ಹೋದರೆ ಅದಾಗದು. ಜನಕರಾಜನು ವಿಶ್ವಾಮಿತ್ರನನ್ನೆ ಬೇಡಿಕೊಂಡನು. ಅವನು ಒಪ್ಪಿಕೊಂಡು ಅಯೋಧ್ಯೆಗೆ ಹೊರಟನು.

ಅಯೋಧ್ಯೆಯಲ್ಲಿ ದಶರಥ ಮಹಾರಾಜನು ಮಕ್ಕಳೊಡನೆ ಅತ್ಯಾನಂದದಿಂದ ಕಾಲ ಕಳೆಯುತಿದ್ದನು. ಒಂದು ದಿನ ವಿಶ್ವಾಮಿತ್ರಮುನಿಯು ಅವನ ಸಭೆಗೆ ಬಂದನು. ರಾಜನು ಅವನನ್ನು ಬಹಳ ಮರ್ಯಾದೆಯಿಂದ ಬರಮಾಡಿಕೊಂಡನು. ಅವನಿಗೆ ಯೋಗ್ಯವಾದ ಆಸನವನ್ನು ಕೊಟ್ಟನು. ತಾನು ಸಿಂಹಾಸನದಿಂದ ಎದ್ದು, ಕೆಳಕ್ಕಿಳಿದು ಬಂದು, ಅವನ ಬಳಿಯಲ್ಲಿ ನಿಂತುಕೊಂಡನು. ಮುನಿಯು ಅತ್ತ ಬರುವುದರ ಕಾರಣವೇನೆಂದು ವಿಚಾರ ಮಾಡಿದನು. ತನ್ನಿಂದ ಆಗತಕ್ಕುದೇನೆಂದು ಕೇಳಿದನು. ಬೇಕಾದುದನ್ನು ತಾನು ಮಾಡಿಕೊಡುವೆನು ಎಂದು ಹೇಳಿಕೊಂಡನು. ಅರಸನು ಈ ರೀತಿಯಾಗಿ ಮಾತುಕೊಟ್ಟ ಬಳಿಕ, ವಿಶ್ವಾಮಿತ್ರನು,—'ಮಹಾರಾಜನೆ, ರಾಕ್ಷಸರು ಯಜ್ಞಗಳನ್ನು ಮಾಡದಂತೆ ನಮಗೆ ಬಾಧೆ ಕೊಡುತಿದ್ದಾರೆ. ಯಜ್ಞಗಳನ್ನು ಮಾಡದಿದ್ದರೆ ಲೋಕಕ್ಕೆ ಅಮಂಗಲವು. ಆದುದರಿಂದ, ನಿನ್ನ ಮಗಂದಿರಾದ ರಾಮಲಕ್ಷ್ಮಣರನ್ನು ರಾಕ್ಷಸರನ್ನು ಕೊಲ್ಲುವ ಲೋಕಹಿತಕ್ಕಾಗಿ ನನ್ನ ಸಂಗಡ ಕಳುಹಿಕೊಡಬೇಕು.' ಎಂದನು.

ದಶರಥನಿಗೆ ಈ ಮಾತುಗಳನ್ನೆಲ್ಲ ಕೇಳಿ ತಲೆತಿರುಗಿತು. "ರಾಮಲಕ್ಷ್ಮಣರಿಗೆ ಇನ್ನೂ ಹದಿನಾರು ವರ್ಷ ವಯಸ್ಸಾಗಿಲ್ಲ. ಇವರು ರಾಕ್ಷಸರನ್ನು

ಹೇಗೆ ದಂಡಿಸುವರು? ನಾನೇ ಬಂದು ರಾಕ್ಷಸರನ್ನು ನಾಶಮಾಡುವೆನು" ಎಂದು ಅವನು ಹೇಳಿದನು.

ವಿಶ್ವಾಮಿತ್ರನಿಗೆ ಸಿಟ್ಟೇರಿ ಮೂಗಿನ ತುದಿಯು ಕೆಂಪಾಗಲು ತಡ ವಾಗುವುದಿಲ್ಲ. 'ನನ್ನ ಮಾತಿಗೆ ಮರ್ಯಾದೆಯಿಲ್ಲವೆ? ಬೇಕಾದುದನ್ನೆಲ್ಲ ಮಾಡಿ ಕೊಡುವೆನೆಂದು ಮಾತು ಕೊಟ್ಟು, ಈಗ ಕೇಳಿದಾಗ ಮಾತ್ರ ಈ ಮಾತನ್ನಾಡುವುದೇ? ನೀನಾಗಲಿ ನಿನ್ನ ಸೈನ್ಯವಾಗಲಿ ನನಗೆ ಬೇಡ. ನನಗೆ ಬೇಕಾದಷ್ಟನ್ನೆ ನಾನು ಕೇಳಿದೆನು. ಕೊಡುವೆಯಾದರೆ ಕೊಡು. ಇಲ್ಲವಾದರೆ ಬೇರೊಂದೂ ನನಗೆ ಬೇಡ. ನಿನ್ನ ಮಾತು ನಿನಗೇ ಇರಲಿ. ನನಗೆ ಮಾತು ಕೊಟ್ಟು ವಂಚನೆಮಾಡಿದ ಪಾಪವು ನಿನ್ನ ತಲೆಯ ಮೇಲೆಯೆ ಇರಲಿ. ರಾಮಲಕ್ಷ್ಮಣರನ್ನು ನಿನ್ನ ತೊಡೆಗಳ ಮೇಲೂ, ನಿನ್ನ ಪಾಪವನ್ನು ನಿನ್ನ ತಲೆಯ ಮೇಲೂ ಹೊರುತ್ತ, ಈ ಸಿಂಹಾಸನದ ಮೇಲೆ ಅಲಂಕಾರ ವಾಗಿ ಕುಳಿತುಕೊ! ನಿನ್ನಂತಹ ಅರಸುಗಳ ಮಾತಿನ ಬೆಲೆ ತಿಳಿಯಿತು. ನಾನು ಬಂದ ಹಾದಿ ಹಿಡಿದು ಮರಳುವೆನು.' ಎಂದು ವಿಶ್ವಾಮಿತ್ರನು ಸಿಟ್ಟಾಗಿ ಹೇಳುತ್ತ ಎದ್ದನು.

ದಶರಥನು, ಮುನಿಯ ಮಾತನ್ನು ಮೀರಲೂ ಒಲ್ಲನು; ಮಕ್ಕಳನ್ನು ಅಗಲಿ ಇರಲೂ ಒಲ್ಲನು. ಎಂತಹ ಬಿಕ್ಕಟ್ಟು! 'ಇವರು ಹಸುಗೂಸು ಗಳಂತಿರುವರು, ಇವರನ್ನು ಕ್ಷಮಿಸಿರಿ. ಇವರನ್ನು ಬಿಟ್ಟು ನಾನೂ ಇರ ಲಾರೆನು, ರಾಣಿಯರೂ ಇರಲಾರರು! ಕ್ಷಮಿಸಿರಿ!' ಎಂದು ಅವನು ಬೇಡಿಕೊಂಡನು.

ವಿಶ್ವಾಮಿತ್ರನು ಒಂದೂ ಮಾತನ್ನಾಡಲಿಲ್ಲ. ಅವನು ಬೇಗಬೇಗನೆ ಕಾಲಿಗೆ ಹಾವುಗೆ ಸಿಕ್ಕಿಸಿಕೊಂಡು ನಡೆಯುವ ಅವಸರದಲ್ಲಿದ್ದನು. ಎಲ್ಲಿ ಯಾದರೂ ಶಾಪ ಕೊಡುವನೊ ಎಂದು ದಶರಥನಿಗೆ ಭಯಹಿಡಿದು, ಅವನು ನಡುಗಿದನು.

ಆಗ ವಸಿಷ್ಠನು—'ಮಹಾರಾಜನೆ! ಸುಮ್ಮನೆ ಬೆದರಬೇಕೆ? ಕ್ಷತ್ರಿಯ ನಾದವನು ಈ ರೀತಿ ಬೆದರುವುದೆ? ಅವನ ಮಕ್ಕಳೂ ರಾಜ್ಯದ ರಕ್ಷಣೆ ಗಾಗಿಯೆ ಇರಬೇಕಲ್ಲವೆ? ಮಕ್ಕಳನ್ನು ಮೋಹಿಸಿ, ಕರ್ತವ್ಯವನ್ನು ಮರೆಯ

ಲಾಗುವುದೆ? ಕೊಟ್ಟ ಮಾತನ್ನು ಬಿಟ್ಟು ಬೇರೆ ಮಾತೆತ್ತುವುದು ಧರ್ಮವೆ? ಅದೂ ಅಲ್ಲದೆ, ವಿಶ್ವಾಮಿತ್ರನು ಮೊದಲು ರಾಜನಾಗಿದ್ದು, ಈಗ ಋಷಿ ಯಾಗಿರುವನು! ಅವನು ರಾಮಲಕ್ಷ್ಮಣರಿಗೆ ಯೋಗ್ಯವಾದ ಯುದ್ಧ ವಿದ್ಯೆಯನ್ನು ಕಲಿಸಿಕೊಡುವನು. ರಾಕ್ಷಸರನ್ನು ಕೊಲ್ಲುವುದಕ್ಕೆ ನಿನ್ನ ಮಕ್ಕಳು ಬೇಗನೆ ಸಿದ್ಧರಾಗುವುದು ಉತ್ತಮವಲ್ಲವೆ? ಇತರ ಎಲ್ಲ ವಿಷಯ ಗಳಲ್ಲಿ ಇವರು ದೇವರಂತೆ ಕಾಣುವರು. ಯುದ್ಧದಲ್ಲಿಯೂ ಎಣೆಯಿಲ್ಲ ದವರಾಗಿ, ರಾಕ್ಷಸರನ್ನು ಸಂಹರಿಸುವರಾದರೆ, ಇವರು ದೇವರಂತೇ ಆಗುವ ರೆಂಬುದರಲ್ಲಿ ಸಂಶಯವಿಲ್ಲ. ರಾಮಲಕ್ಷ್ಮಣರು ವಿಶ್ವಾಮಿತ್ರನೊಡನೆ ತೆರಳಲಿ!' ಎಂದು ಹೇಳಿದನು.

ದಶರಥನು ಸ್ವಲ್ಪ ಹೊತ್ತು ಚಿಂತಿಸಿದನು. ಮಕ್ಕಳಿಬ್ಬರಿಗೂ ಮುನಿ ಯೊಡನೆ ತೆರಳುವುದಕ್ಕೆ ಅಪ್ಪಣೆಕೊಟ್ಟು ಆಶೀರ್ವಾದ ಮಾಡಿದನು. ಅವ ರಿಬ್ಬರೂ ತಂದೆಯ ಮತ್ತು ಗುರುವಿನ ಕಾಲಿಗೆ ಬಿದ್ದು ನಮಸ್ಕರಿಸಿ, ವಿಶ್ವಾ ಮಿತ್ರನೊಡನೆ ಹೊರಟರು. ಅವನಿಗೆ ಸಂತೋಷವಾಯಿತು; ರಾಜನಿಗೆ ದುಃಖವಾಯಿತು.

ಸರಯೂನದಿಯ ತೀರಕ್ಕೆ ಬಂದ ಕೂಡಲೆ, ರಾಜಕುಮಾರರು ಸ್ನಾನಮಾಡಬೇಕೆಂದು ಮುನಿಯು ಹೇಳಿದನು. ಅವರು ಸ್ನಾನ ಮುಗಿಸಿ ಬಂದರು. ಆಗ ಬಲಾ, ಅತಿಬಲಾ, ಎಂಬುವ ಎರಡು ಮಹಾಶಕ್ತಿಗಳನ್ನು ಉಂಟುಮಾಡುವ ವಿದ್ಯೆಯನ್ನು ವಿಶ್ವಾಮಿತ್ರನು ಅವರಿಬ್ಬರಿಗೂ ಕಲಿಸಿ ಕೊಟ್ಟನು. ಈ ವಿದ್ಯೆಗಳ ದೆಸೆಯಿಂದ ಅವರು ಎಂತಹರನ್ನೂ ಜಯಿಸುವ ಉಪಾಯ ಪಡೆದರು. ಬಳಿಕ ರಾಮನು ಮುಂದಾಗಿಯೂ, ಅವನ ಹಿಂದೆ ಲಕ್ಷ್ಮಣನೂ ಇವರಿಬ್ಬರ ಹಿಂದೆ ವಿಶ್ವಾಮಿತ್ರನೂ ವನವನ್ನು ಪ್ರವೇಶಿಸಿ ನಡೆದರು. ರಾಮ-ಲಕ್ಷ್ಮಣರ ಕೈಯಲ್ಲಿ ಬಿಲ್ಲುಬಾಣಗಳಿದ್ದುವು. ರಾಕ್ಷಸರಿಗೆ ಬೆದರುವರೇ ಇಲ್ಲವೇ ಎಂದು ನೋಡಲು ಅವರನ್ನೇ ಮುನಿಯು ಮುಂದಿಟ್ಟು ಕೊಂಡು ನಡೆಯುತಿದ್ದನು. ಭಯವೆಂದರೆ ಅದೇನೆಂದು ಅವರಿಗೆ ಗೊತ್ತಾ ಗಿರಲಿಲ್ಲ. ದಾರಿಯಲ್ಲಿ ನಡೆವಾಗ, ಮುನಿಯು ಅವರಿಗೆ ಅವೆಲ್ಲ ಸ್ಥಳಗಳ ಪುರಾಣಕಥೆ ಹೇಳಿದನು. ಹಿಂದಣ ವೀರರ ಚರಿತ್ರೆಗಳನ್ನು ಹೇಳಿದನು. ಇದರಿಂದ, ಆ ದಾರಿ ನಡೆದ ಆಯಾಸವೇನೂ ಅವರಿಗೆ ಉಂಟಾಗಲಿಲ್ಲ.

ಹೀಗೆ ನಡೆದು, ಕೊನೆಗೆ ಅವರು ಒಂದು ವನಾಂತರವನ್ನು ಸೇರಿದರು. ಆಗ ವಿಶ್ವಾಮಿತ್ರನು,—'ಕುಮಾರರೆ! ಮಾರೀಚನ ತಾಯಿ ತಾಟಕೆಯು ಈ ವನದಲ್ಲಿ ಇರುವಳು. ಅವಳಿಗೆ ಹೆದರಿ, ಯಾರೂ ವನದಲ್ಲಿ ಕಾಲಿಡು ವುದಿಲ್ಲ. ಇಲ್ಲಿ ಎರಡು ದಾರಿಗಳು ಕಾಣುವುದಿಲ್ಲವೆ? ಈ ದಾರಿಯಾಗಿ ಹೋದರೆ ಮೂರು ಗಳಿಗೆಗಳಲ್ಲಿ ಮನೆಸೇರಬಹುದು; ಆ ದಾರಿಯಾಗಿ ನಡೆದರೆ ಮೂರು ದಿನಗಳು ಬೇಕಾಗುವುವು. ಹತ್ತಿರದ ಹಾದಿಯಲ್ಲಿ ಹೆದರಿಕೆ ಬಹಳವಿದೆ; ಅಲ್ಲೇ ತಾಟಕೆ ಇರುವಳು. ಅವಳು ಹಿಡಿದು ನುಂಗುವಳು. ಅಬ್ಬ! ಅವಳ ಹೆಸರು ನೆನೆದರೇ ನೆತ್ತರು ಬತ್ತುವುದಲ್ಲಾ!' ಎಂದನು.

'ಅಂತಹಳನ್ನು ಕೊಂದಿಕ್ಕಿದರೆ ಲೋಕಕ್ಕೆ ಉಪಕಾರವಾಗುವುದಲ್ಲವೆ? ಸತ್ತರೆ, ನಾವಿಬ್ಬರು ಸಾಯುವೆವು; ಬದುಕಿದರೆ ಅವಳನ್ನು ಕೊಂದು ಈ ದೇಶದ ಜನರಿಗೆ ತೊಂದರೆ ತಟ್ಟದಂತೆ ಮಾಡುವೆವು' ಎಂದು ರಾಮನು ನುಡಿದು ಆ ಹತ್ತಿರದ ಹಾದಿಯನ್ನೆ ಹಿಡಿದನು. ಅವನು ಧನುರ್ಬಾಣ ಗಳನ್ನು ಸಜ್ಜುಗೊಳಿಸಿದನು. ಬಿಲ್ಲನ್ನು ಸರಿಮಾಡಿ ಅದರ ಹಗ್ಗಗಳನ್ನು ಎಳೆದು ಠೇಂಕಾರವನ್ನು ಮಾಡಿದನು. ಆ ಶಬ್ದವನ್ನು ಕೇಳಿ, ತಾಟಕೆಯು ಅವರು ಇದ್ದಲ್ಲಿಗೇ ಬಾಯಿತೆರೆದು ಓಡ್ಯೋಡಿ ಬಂದಳು. ಅವಳ ಓಡಾಟಕ್ಕೆ ಇದಿರಿದ್ದ ಪೊದರುಗಳನ್ನೂ ಅವಳು ಗಣ್ಯಕ್ಕೆ ತರಲಿಲ್ಲ; ಮುಳ್ಳುಗಳು ಚುಚ್ಚಿದರೂ ಲಕ್ಷ್ಯಮಾಡದೆ, ಬಹು ದಿನಗಳ ಹಸಿವು ಆರಿಸಲು ಅವಳು ಇವರ ಕಡೆಗೆ ಬಂದಳು. ಮನುಷ್ಯರ ಮಾಂಸದ ರುಚಿಯನ್ನು ಎಣಿಸಿ, ಅವಳ ಹಲ್ಲುಗಳ ಸಂದಿನಿಂದ ನೀರು ಒಸರಿತು. 'ರಾಮಾ, ಲಕ್ಷ್ಮಣಾ,— ಹಿಂಸೆ ಮಾಡುವವಳು ಹೆಂಗಸೆಂದು ದಂಡಿಸದಿರಬಾರದು. ಅದರಲ್ಲಿ ಪಾಪ ವಿಲ್ಲ' ಎಂದು ಮುನಿಯು ಹೇಳಿದನು. ಅವಳು ತೋಳು ಚಾಚಿ, ಬಾಯಿ ತೆರೆದು, ನಾಲಗೆ ಚಪ್ಪರಿಸಿ ಬರುತಿದ್ದಂತೆಯೆ, ಅವಳ ಕೈಗೆ, ಬಾಯಿಗೆ, ಹೊಟ್ಟೆಗೆ, ತಲೆಗೆ, ತುಂಬ ಬಾಣಗಳನ್ನು ರಾಮ-ಲಕ್ಷ್ಮಣರು ಗುರಿಯಿಟ್ಟು ಹೊಡೆದರು. ಮಾಂಸದ ಬದಲಾಗಿ ಗಂಟಲೊಳಗೆ ಸಿಕ್ಕಿಕೊಂಡ ಬಾಣ ಗಳನ್ನೆ ಅವಳು ನುಂಗಿಯೂ ನುಂಗಲಾರದೆ ಬಿದ್ದಳು. ಗಾಯಗಳಿಂದ ನೆತ್ತರು ಸೋರಿತು. ಎದೆಗೆ ನಾಟಿಕೊಂಡ ಬಾಣದಿಂದ ಅವಳು ಮಡಿ

ದಳು. ಎಂತಹ ವಿಕಾರವುಳ್ಳ ದೇಹ! ಅವಳ ಮರಣದಿಂದ ಜನರಿಗೆ ಉಪ ಕಾರವಾಯಿತೆಂದು ಅವರಿಬ್ಬರಿಗೂ ಆನಂದವಾಯಿತು. ಆಗ ಮುನಿಯು, ಅವರು ತನ್ನ ಉಪದೇಶಕ್ಕೆ ಯೋಗ್ಯರೆಂದು ತಿಳಿದುಕೊಂಡು, ಇನ್ನೂ ಕೆಲವು ಯುದ್ಧ ಕ್ರಮಗಳನ್ನು ಅವರಿಗೆ ಬೋಧಿಸಿದನು.

ಆ ವನದ ಆಚೆಗೆ ಇದ್ದ ತಪೋವನದಲ್ಲಿ ಮುನಿಗಳು ಇದ್ದರು. ಅವರು ಯಜ್ಞಮಾಡುತ್ತಿದ್ದರು. ರಾಕ್ಷಸರು ಬರುವರೆಂದು ಬೆದರಿ ಅವರ ಯಜ್ಞವು ಚೆನ್ನಾಗಿ ಸಾಗುತ್ತಿರಲಿಲ್ಲ. ರಾಮ-ಲಕ್ಷ್ಮಣರು ಅಲ್ಲಿ ಕಾವಲು ನಿಂತರು. ಬಂದ ರಾಕ್ಷಸರನ್ನು ಸುಲಭವಾಗಿ ಕೊಂದರು. ಆರನೆಯ ದಿನ ಸುಬಾಹು ಎಂಬ ರಾಕ್ಷಸನು ಅಲ್ಲಿಗೆ ಬರಲು, ರಾಮನು ಅವನನ್ನು ಕೊಂದನು. ಅವನ ಸಂಗಡ ಇದ್ದ ಮಾರೀಚನನ್ನು ರಾಮನು ಹೊಡೆದು ಬಡೆದು, ಬಹು ದೂರಕ್ಕೆ ಓಡಿಸಿದನು. ಇವರಿಬ್ಬರೂ ಅಲ್ಲಿನ ರಾಕ್ಷಸರ ಗೊತ್ತುಗಾರರಾಗಿದ್ದರು. ಇವರಿಬ್ಬರು ಈ ರೀತಿಯಾದುದನ್ನು ಕಂಡು, ಉಳಿದ ಅವರ ಹಿಂಬಾಲಿಕರು ಜೀವವುಳಿಸಿಕೊಂಡರೆ ಸಾಕೆಂದು ಎತ್ತೆತ್ತಲೊ ಪಲಾಯನಮಾಡಿದರು. ಯಜ್ಞವು ಸಾಂಗವಾಗಿ ನೆರವೇರಿತು. ಮುನಿಗ ಳೆಲ್ಲರೂ ರಾಜಕುಮಾರರನ್ನು ಆಶೀರ್ವದಿಸಿದರು.

ಯಜ್ಞವು ಕೊನೆಗೊಂಡ ದಿನ, ಮಿಥಿಲಾಪುರದಿಂದ ಜನಕರಾಜನ ಕಡೆಯ ಒಬ್ಬ ದೂತನು ಅತ್ತ ಬಂದನು. ಜನಕನ ಮಗಳಾದ ಸೀತಾ ದೇವಿಗೆ ಕೆಲವೇ ದಿನಗಳಲ್ಲಿ ಸ್ವಯಂವರವಾಗುವುದು; 'ಮುನಿಗಳೆಲ್ಲರೂ ಅತ್ತ ಬಂದು ಚಂದಗಾಣಿಸಿಕೊಟ್ಟು ವಧೂವರರನ್ನು ಹರಸಿ, ಉತ್ಸವವನ್ನು ಸಾಂಗವಾಗಿ ನೆರವೇರುವಂತೆ ಮಾಡಿಕೊಡಬೇಕೆಂದು' ಅವರೆಲ್ಲರು ತನ್ನ ಊರಿಗೆ ಬರಲು ಜನಕರಾಜನು ಆಮಂತ್ರಣವನ್ನು ಆ ದೂತನ ಕೈಯಲ್ಲಿ ಕೊಟ್ಟು ಕಳುಹಿದ್ದನು. ವಿಶ್ವಾಮಿತ್ರನಿಗೆ ಇದರಿಂದ ಬಹಳ ಸಂತೋಷ ವಾಯಿತು. ತನ್ನ ಶಿಷ್ಯರ ಪರಾಕ್ರಮವನ್ನು ಸ್ವಯಂವರಕಾಲದಲ್ಲಿ ಭರತ ಖಂಡದ ಮುಖ್ಯ ಅರಸುಗಳ ಇದಿರಲ್ಲಿ ತೋರಿಸಬೇಕೆಂದೂ, ಅವರ ಸಾಹಸ ವನ್ನು ನೋಡಿ ಎಲ್ಲರೂ ಅವರನ್ನೂ ತನ್ನನ್ನೂ ಕೊಂಡಾಡುವರೆಂದೂ ತಿಳಿದು ಅವನು ಬಹಳ ಸಂತೋಷಪಟ್ಟನು. ಜನಕನಲ್ಲಿ ಆಗುವ ಸ್ವಯಂವರದಲ್ಲಿ ಒಂದು ಪಣವು ಇದ್ದಿತು. ಅವನು, ಶಿವನ ಧನುಸ್ಸನ್ನು ಸಭೆಯಲ್ಲಿ ಇಟ್ಟು,

ಅದನ್ನು ಯಾವನು ಮುರಿಯುವನೊ ಅವನಿಗೆ ತನ್ನ ಮಗಳನ್ನು ಕೊಡುವು ದಾಗಿ ಸಾರಿದ್ದನು. ಸೀತಾದೇವಿಯಂತಹ ಚೆಲುವೆಯೂ ಗುಣವತಿಯೂ ಭರತಖಂಡದ ಯಾವ ರಾಜನಲ್ಲಿಯೂ ಇಲ್ಲವೆಂದು, ರಾಜರೆಲ್ಲರೂ ಉತ್ಸಾಹ ದಿಂದ ಆ ಸಭೆಗೆ ಬರುವರಲ್ಲವೆ? ಅವರಲ್ಲಿ ಆ ಧನುಸ್ಸನ್ನು ಮುರಿಯುವ ವನೇ ಬಲಶಾಲಿಯೆಂದು ನಿಶ್ಚಯವಾಗುವುದಲ್ಲವೆ? ರಾಕ್ಷಸರೇ ತುಂಬಿ ರುವ ದೇಶ, ಅತಿ ಬಲಶಾಲಿಯಾದವನೆ ತನ್ನ ಮಗಳ ಮಾನವನ್ನು ಕಾಪಾಡ ಬಲ್ಲನು, ಎಂದು ಜನಕನು ತಿಳಿದು, ಈ ಪಣವನ್ನು ಮಾಡಿದ್ದನು. ಆದರೆ ಅಂತಹ ಭಾರವೂ ಬಿಗಿಯೂ ಆದ ಬಿಲ್ಲನ್ನು ಮುರಿಯುವುದು ಹಾಗಿರಲಿ, ಬಾಗಿಸುವವರಾಗಲಿ, ಕೊನೆಗೆ, ನೆಲದಿಂದ ಎತ್ತಿ ಹಿಡಿಯಬಲ್ಲವರಾಗಲಿ ಯಾರೂ ಇದ್ದಾರೆಯೆ, ಎಂದು ಜನರಲ್ಲಿ ಸಂದೇಹವಿದ್ದಿತು. ರಾಕ್ಷಸರೂ ಈ ಸ್ವಯಂವರಕ್ಕೆ ಲವಲವಿಕೆಯಿಂದ ಬರುತಿದ್ದರು. ಇದನ್ನೆಲ್ಲ ಮುನಿಗಳಿಗೆ ವಿಶ್ವಾಮಿತ್ರನು ತಿಳುಹುವಾಗ, ರಾಮ-ಲಕ್ಷ್ಮಣರು ಕೇಳಿದರು. ಅಂತಹ ಧನುಸ್ಸನ್ನು ಒಮ್ಮೆ ನೋಡಬೇಕೆಂದು ಅವರು ಆಸೆಪಟ್ಟು, ಮುನಿಗಳ ಜತೆಯಲ್ಲಿ ಮಿಥಿಲಾನಗರದ ಕಡೆಗೆ ಮುಂದಕ್ಕೆ ನಡೆದರು.

ಅಂದಿನ ಸಂಜೇಹೊತ್ತಿಗೆ ಅವರು ಗೌತಮಋಷಿಯ ಆಶ್ರಮಕ್ಕೆ ಬಂದರು. ಅಲ್ಲಿ ಆ ಋಷಿಯ ಪತ್ನಿಯಾದ ಅಹಲ್ಯೆಯು ಕಲ್ಲಿನಂತೆ ಬಿದ್ದು ಕೊಂಡಿದ್ದಳು. ಅದೇಕೆಂದು ರಾಮ-ಲಕ್ಷ್ಮಣರು ವಿಶ್ವಾಮಿತ್ರನನ್ನು ಕೇಳಿ ದರು. ಆಗ ಅವನು ಅಹಲ್ಯೆಯ ಹಿಂದಣ ಚರಿತ್ರವನ್ನು ನಿರೂಪಿಸಿದನು. ಪತಿಯ ಮನಸ್ಸಿಗೆ ಹೆಚ್ಚಿನ ದುಃಖ ಉಂಟಾಗುವ ಹಾಗೆ ಇವಳು ಒಮ್ಮೆ ನಡೆ ದಿದ್ದಳು. ಪತಿವ್ರತೆಯರು ಹಾಗಿರುವುದೆ? ಋಷಿಯ ಹೆಂಡತಿಯಲ್ಲವೆ? ಇತರ ಸ್ತ್ರೀಯರಿಗೆ ಇವಳು ಮಾದರಿಯಾಗಿರಬೇಕಷ್ಟೆ. ಇವಳೆ ರೀತಿಕೆಟ್ಟವ ಳಾದರೆ, ಋಷಿಗೆ ಶಿಷ್ಯರಾಗಿರುವವರು ಏನೆಂದಾರು? ಆಶ್ರಮದ ಧರ್ಮಕ್ಕೆ ಕೊರತೆಯಲ್ಲವೆ? ತನ್ನನ್ನು ಇತರ ಪುರುಷರು ಸೆಣಸಿದರೆ, ಅವರನ್ನು ದಂಡಿ ಸುವ ಬಲವು ಪ್ರತಿಯೊಬ್ಬ ಪತಿವ್ರತೆಯಲ್ಲಿರಬೇಕು. ಪತಿಯು ಧ್ಯಾನ ಸ್ನಾನ ಉಪದೇಶಗಳಿಗಾಗಿ ಸಿಕ್ಕಕಡೆಗೆ ಹೋಗುವನು. ಆಗ, ಒಬ್ಬಳಾಗಿಯೆ ಆಶ್ರಮದಲ್ಲಿರುವ ಸ್ತ್ರೀಯು ತನ್ನ ಗೌರವವನ್ನು ಕಾಪಾಡಿಕೊಳ್ಳಬೇಡವೆ? ಅದ ಕ್ಕೆ ಹಿಂಜರಿಯುವುದೆ? ಹೀಗಿರುವ ಕಾರಣ, ಅತಿ ಬಲಶಾಲಿಯೂ ತೇಜೋ

ವಂತನೂ ಆದ ರಾಜಪುತ್ರನು ಆಶ್ರಮಕ್ಕೆ ಬರುವ ತನಕ ಇದ್ದಲ್ಲೇ ಬಿದ್ದಿ ರೆಂದು, ಗೌತಮನು ಅವಳಿಗೆ ಸಿಟ್ಟಾಗಿ ಹೇಳಿದ್ದನು. ಅವಳು ತನ್ನ ತಪ್ಪುನಡತೆ ಯನ್ನು ತಿಳಿದು, ಪತಿಯ ಮಾತನ್ನು ಮೀರದೆ ಅಲ್ಲೇ ಶಿಲೆಯಂತೆ ಬಿದ್ದು ಕೊಂಡಿದ್ದಳು. ಅವಳ ಪಾಪಕ್ಕೆ ಅದೇ ಪ್ರಾಯಶ್ಚಿತ್ತವಾಗಿದ್ದಿತು. ರಾಮನು ಆಶ್ರಮಕ್ಕೆ ಬಂದೊಡನೆಯೇ ಅವನ ದಿವ್ಯವಾದ ಯೋಗ್ಯತೆಯನ್ನು ತಿಳಿದು ಅಹಲ್ಯೆಯು ಅವನ ಕಾಲಬಳಿಯಿಂದ ಎದ್ದು, ಅವನ ಪರಾಕ್ರಮವನ್ನು ಕೊಂಡಾಡಿದಳು. ಅವಳ ದಂಡನೆಯು ಅಲ್ಲಿಗೆ ಮುಗಿಯಿತು. ಗೌತಮನು ಪುನಃ ತನ್ನ ಪತ್ನಿಯೊಡನೆ ಸುಖದಿಂದ ಇದ್ದನು. ರಾಮನೂ ಯೋಗ್ಯಳಾದ ಪತ್ನಿಯನ್ನು ಪಡೆವ ಹಾಗೆ, ಅವನೂ ಅಹಲ್ಯೆಯೂ ರಾಮನನ್ನು ಆಶೀರ್ವ ದಿಸಿದರು. ಅವರೂ ಮಿಥಿಲೆಗೆ ಹೊರಟರು.

ಮರುದಿನ ಇವರೆಲ್ಲರೂ ಮಿಥಿಲಾಪುರವನ್ನು ಸೇರಿದರು. ಜನಕ ರಾಜನ ಅರಮನೆಯಲ್ಲಿಯೆ ಇವರಿಗೆ ಬೀಡು ಕೊಡಲಾಯಿತು. ರಾಜನು ತಾನೇ ಇವರೆಲ್ಲರನ್ನು ಯೋಗ್ಯರೀತಿಯಲ್ಲಿ ಉಪಚರಿಸಿದನು. ವಿಶ್ವಾ ಮಿತ್ರನು, ರಾಮ-ಲಕ್ಷ್ಮಣರನ್ನು ಜನಕನಿಗೆ ತೋರಿಸಿ, 'ರಾಜನೇ! ಇವರಿಬ್ಬರು ಬಾಲಕರು ಸೂರ್ಯವಂಶದ ಅರಸಾಗಿರುವ ಅಯೋಧ್ಯೆಯ ದಶರಥರಾಜನ ಕುಮಾರರು; ಶಿವಧನುಸ್ಸನ್ನು ನೋಡುವುದಕ್ಕಾಗಿ ಬಂದಿರುವರು; ಇವರ ಪರಾಕ್ರಮದ ದೆಸೆಯಿಂದಲೆ ನಾವು ನಮ್ಮ ಯಜ್ಞಗಳನ್ನು ಸಾಂಗವಾಗಿ ಮುಗಿಸಿ ಇಲ್ಲಿಗೆ ಬಂದೆವು. ರಾಕ್ಷಸರನ್ನೆಲ್ಲ ಇವರು ಕಾದುದರಿಂದ ನಮ್ಮ ಯಜ್ಞಗಳಿಗೆ ಯಾವ ಕಂಟಕವೂ ತಟ್ಟಲಿಲ್ಲ' ಎಂದನು. ಜನಕರಾಜನು ರಾಜಕುಮಾರರ ಅತಿಶಯವಾದ ರೂಪಲಾವಣ್ಯವನ್ನು ನೋಡಿದನು. 'ಅಹ! ನಾನು ಸುಮ್ಮನೆ ಇಂತಹ ಕಠಿನವಾದ ಒಂದು ಪಣವನ್ನು ಮಾಡಿಟ್ಟೆನಲ್ಲ! ಇಂತಹ ಉತ್ತಮ ಕುಲದ, ಯೋಗ್ಯರಾದ ವರರು ಇನ್ನೆಲ್ಲಿ ಸಿಗುವರು? ಸೀತಾದೇವಿಯ ಭಾಗ್ಯವು ಹೇಗಿರುವುದೋ?' ಎಂದು ಅವನು ಭಾವಿಸಿ— 'ಎಂತೆಂತಹ ಮಹಾ ಬಲಶಾಲಿಗಳಾದ ಅರಸುಗಳು ಇಲ್ಲಿಗೆ ಬಂದು ಆ ಬಿಲ್ಲನ್ನು ಎತ್ತಲಾರದೆ ನಿರಾಶೆಯಾಗಿ ನೊಂದರು. ಈ ಬಾಲಕರಿಂದ ಅದು ಹೇಗೆ ಸಾಗುವುದೊ ತಿಳಿಯದಾಗಿದೆ!' ಎಂದು ವಿಶ್ವಾಮಿತ್ರನಿಗೆ ತಿಳುಹಿದನು. ಮುನಿಯು 'ಬೆಂಕಿಯ ಒಂದು ಕಿಡಿಯೇ ಹುಲ್ಲುಬೆಟ್ಟಗಳ ಸಾಲನ್ನೂ ಸುಡ ಬಲ್ಲುದಲ್ಲವೆ? ಯೋಚನೆ ಏತಕ್ಕೆ?' ಎಂದನು.

ಬಳಿಕ, ಜನಕರಾಜನ ಅಪ್ಪಣೆಯಂತೆ, ಆ ಮಹಾಧನುಸ್ಸನ್ನು ಸಭಾ ಮಂಟಪಕ್ಕೆ ತಂದರು. 'ಬಾಲಕನೊಬ್ಬನು ಶಿವಧನುಸ್ಸನ್ನು ಮುರಿಯು ವನಂತೆ,' ಎಂದು ಊರಲ್ಲೆಲ್ಲ ಸುದ್ದಿ ಪಸರಿತು. ಸಭೆಯು ತುಂಬ ನೆರೆಯಿತು. ರಾಮಚಂದ್ರನು ಅನಾಯಾಸವಾಗಿ ಆ ಧನುಸ್ಸನ್ನು ಮೇಲಕ್ಕೆತ್ತಿದನು. ಅದರ ಎಂದು ಕೊನೆಯನ್ನು ನೆಲಕ್ಕೆ ಒತ್ತಿ, ಅದನ್ನು ತನ್ನ ಎಡಗಾಲಿನ ಹೆಬ್ಬೆಟ್ಟಿನ ಒತ್ತಿನಲ್ಲಿ ಹಿಡಿದು, ಬಲಗೈಯಿಂದ ಅದರ ಮತ್ತೊಂದು ಕೊನೆ ಯನ್ನು ಬಾಗಿಸಿ, ಎಡಗೈಯಿಂದ ಅದರ ಮಧ್ಯವನ್ನು ದೂರಕ್ಕೆ ದೂಡಿ, ಹಗ್ಗವನ್ನು ಕೊನೆಗಳೆರಡರ ನಡುವೆ ಗಂಟಿಕ್ಕಿ, ಬಾಣವನ್ನು ಹೂಡಿ, ಧನುಸ್ಸನ್ನು ಎತ್ತಿಹಿಡಿದು, ಬಾಣವನ್ನು ಬಲ ಕಿವಿಯ ತನಕ ಎಳೆಯಲು— ಅಹಹ, ಎಂತಹ ಬಲ! ಎಂತಹ ಸಾಹಸ! ಎಂತಹ ಜಾಣತನ! ಅವನು ಎಡಗೈ ಹಿಡಿದಲ್ಲೇ ಶಿವಧನುಸ್ಸು 'ಲಟಕ್ ಲಟಕ್' ಎಂದು ಎರಡು ತುಂಡಾಯಿತು. ಮದ್ದಾನೆಯು ಸುಂಡಿಲಿಂದ ಎಳೆಯ ಕಬ್ಬಿನ ಕೋಲನ್ನು ಮುರಿವುದಿಲ್ಲವೆ? ಅದರಂತೆ ಶಿವಧನುಸ್ಸು ತುಂಡಾಯಿತು. ಸಭೆಯಲ್ಲಿ ನೆರೆದಿದ್ದ ರಾಜರುಗಳೆಲ್ಲರೂ ಜಯಧ್ವನಿ ಮಾಡಿದರು. ಜನಕನು ನಕ್ಕು ನೂರುಮಡಿಯಾದನು. ವಿಶ್ವಾಮಿತ್ರನು ಮುಖ ಅರಳಿಸಿ ಕೊಂಡಾಡಿದನು. ಸೀತಾದೇವಿಯು ಮುಗುಳುನಗೆಗೂಡಿ, ಮೆಲ್ಲನೆ ಅಡಿಯಿಡುತ್ತ, ಹೂಮಾಲೆ ಯನ್ನು ಕೈಗಳಲ್ಲೆತ್ತಿಕೊಂಡು, ರಾಮನು ನಿಂತಲ್ಲಿಗೆ ಬಂದಳು. ತಂದೆಗೆ ಮನವೊಪ್ಪುವ ವರನೇ ಅವಳಿಗೆ ದೊರೆತನಲ್ಲವೆ?

ಪಸರಿಸಿದ ಪರಿತೋಷದುಬ್ಬಿನ
ಮುಸುಡಕಾಂತಿಯು ಕಾಂತನಂಘ್ರಿಯ
ಸಸಿನದಲಿ ಥಾಳಿಸುವ ಕದಪಿನ ಪಾಂಗಿನಗ್ಗಳದ।
ನಸುನಗೆಯ ಸಿರಿಮೊಗದ ಲಜ್ಜಾ
ರಸದ ಸೊಬಗಿನ ಸೀತೆ ಸುರಕುಜ
ಕುಸುಮಮಾಲೆಯ ಸಿಕ್ಕಿದಳು ರಘುರಾಮಚಂದ್ರಂಗೆ॥.

ವಿವಾಹವಾಗುವುದೊಂದೆ ಉಳಿಯಿತು. 'ತೀರ್ಥರೂಪರ ಅಪ್ಪಣೆ ಯಿಂದಲ್ಲದೆ ನನಗೆ ಮದುವೆಯಾಗಲಾರದು' ಎಂದು ವಿನಯದಿಂದ ಅವನು ಬಿನ್ನಹ ಮಾಡಿದನು. ಇದು ಒಂದು ಸಂಕಟವಾಯಿತು. ಜನಕರಾಜನು

ವಿಶ್ವಾಮಿತ್ರನ ಬಳಿಗೆ ಬಂದನು. ಅವರಿಬ್ಬರು ಏನೊ ಮಾತಾಡಿಕೊಂಡರು. ವಿಶ್ವಾಮಿತ್ರನು ಅಲ್ಲಿಂದಲೆ ಅಯೋಧ್ಯೆಗೆ ತೆರಳಿದನು. ದಶರಥನು ಅವನೊಬ್ಬನನ್ನೆ ಕಂಡು ದಿಗಿಲುಹೊಂದಿದನು. ಆದರೆ ಮುನಿಯು ಎಲ್ಲವನ್ನೂ ವಿವರಿಸಲು, ಅರಸನು ಆಶ್ಚರ್ಯಹೊಂದಿದನು. ನಗರದಲ್ಲೆಲ್ಲ ಈ ವಾರ್ತೆಯು ಪಸರಿತು. ಊರಿನ ಊರೇ ಸಂಭ್ರಮಗೊಂಡು ಜಯಘೋಷವನ್ನು ಹಾಡಿತು!

ದಶರಥನು ಭರತ, ಶತ್ರುಘ್ನ, ವಸಿಷ್ಠ, ವಿಶ್ವಾಮಿತ್ರರೊಡನೆ ಮಿಥಿಲಾಪುರಕ್ಕೆ ಬಂದನು. ಅವರ ಸಂಗಡ ಮಂತ್ರಿಗಳೂ, ಚತುರಂಗ ಸೇನೆಗಳೂ ಬಂದುವು. ಜನಕರಾಜನು ತನ್ನ ಪರಿವಾರದೊಡನೆ ಅವರನ್ನು ಇದಿರುಗಾಣಿಸಿಕೊಂಡು, ಸಭಾಸ್ಥಾನಕ್ಕೆ ಒಯ್ದು ಯೋಗ್ಯ ಆಸನದಲ್ಲಿ ಕುಳ್ಳಿರಿಸಿದನು. 'ಮಹಾಶಯರೆ! ತಮ್ಮ ಜ್ಯೇಷ್ಠಪುತ್ರನಾದ ರಾಮಚಂದ್ರನು ಇಡೀ ಭರತಭೂಮಿಯಲ್ಲಿ ಯಾರಿಗೂ ಕೈಲಾಗದ ಸಾಹಸವನ್ನು ನಮ್ಮೆದಿರಲ್ಲಿ ಮಾಡಿತೋರಿಸಿದನು. ನಾನು ಪಾಲಿಸಿದ ಕನ್ಯಾಮಣಿ ಸೀತಾದೇವಿಯ ಸ್ವಯಂವರಕ್ಕೆ ಪಣವಾಗಿ ಇಟ್ಟ ಶಿವಧನುಸ್ಸನ್ನು ಅವನೇ ಮುರಿದು ತುಂಡರಿಸಿದನು. ಇನ್ನು ಅವನಿಗೆ ನಾನು ಕನ್ಯಾದಾನವನ್ನು ಮಾಡಬೇಕಾಗಿದೆ. ತಮ್ಮ ಇತರ ಪುತ್ರರನ್ನೂ ಕಂಡು ನಾನು ಮನದಣಿದಿರುವೆನು. ಈಗ ನನ್ನ ಅಭಿಲಾಷೆಯು ಹೀಗಿರುವುದು: ನನ್ನ ಮಗಳಾದ ಊರ್ಮಿಳೆಯನ್ನು ಲಕ್ಷ್ಮಣನಿಗೂ, ನನ್ನ ಸೋದರಪುತ್ರಿಯರಾದ ಮಾಂಡವಿಯನ್ನು ಭರತನಿಗೂ, ಶ್ರುತಕೀರ್ತಿಯನ್ನು ಶತ್ರುಘ್ನನಿಗೂ ಕೊಟ್ಟು, ಸೀತಾದೇವಿಯನ್ನು ರಾಮಚಂದ್ರನಿಗೆ ಒಪ್ಪಿಸುವ ಕಾಲದಲ್ಲೆ ವಿವಾಹಮಾಡಬೇಕೆಂದಿರುವೆನು. ತಾವು ನನ್ನ ಈ ಇಚ್ಛೆಯನ್ನು ಕೈಗೂಡಿಸಿ ಕೊಟ್ಟು ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕು' ಎಂದು ವಿನಯದಿಂದ ವಿಜ್ಞಾಪಿಸಿಕೊಂಡನು. ಜನಕರಾಜನು ರಾಜರ್ಷಿಯೆ ಆದರೂ, ಎಷ್ಟೆಂದರೂ, ಕನ್ಯೆಯ ತಂದೆಯಲ್ಲವೆ?

ದಶರಥರಾಜನು ಈ ಮಾತುಗಳನ್ನು ಕೇಳಿ, ತನ್ನೊಳಗೆ ಬಹಳವಾಗಿ ಹಿಗ್ಗಿಕೊಂಡು, ತನ್ನ ಪೂರ್ವಪುಣ್ಯವು ಫಲಿಸಿತೆಂದು, ಜನಕರಾಜನ ಅಭಿಪ್ರಾಯಕ್ಕೆ ಸಮ್ಮತಿಕೊಟ್ಟನು. ನಾಲ್ಕು ವಿವಾಹಗಳೂ ಶಾಸ್ತ್ರವಿಧಿಗೆ ಅನು

ಸಾರವಾಗಿ ನಡೆದುವು. ಅಂತಹ ಸಂಭ್ರಮಗಳು ಯಾವ ದೇಶದಲ್ಲಿಯೂ ಯಾವ ಕಾಲದಲ್ಲಿಯೂ ಅಪರೂಪವೇ.

ವಿವಾಹೋತ್ಸವಗಳು ಮುಗಿದುವು. ದಶರಥರಾಜನು ಪುತ್ರರೊಡನೆ ಸೊಸೆಯರನ್ನೂ ಕರೆದುಕೊಂಡು ಹೋಗಲು ಜನಕರಾಜನ ಅನುಮತಿ ಕೇಳಿದನು. ಅವನು ಹೆಣ್ಣುಮಕ್ಕಳಿಗೆ ತಾಯಿತಂದೆಯರು ಹೇಳಬೇಕಾಗಿರುವ ಸದುಪದೇಶವನ್ನು ಹೇಳಿಕೊಟ್ಟು, ಸಂತೋಷದಿಂದ ವಧುಗಳನ್ನು ವರರೊಂದಿಗೆ ಅಯೋಧ್ಯೆಗೆ ಕಳುಹಿಕೊಟ್ಟನು. ಇವರು ರಥಗಳನ್ನೇರಿ ಸೈನ್ಯಗಳೊಡನೆ ಪ್ರಯಾಣಮಾಡಿದರು.

ದಾರಿಯಲ್ಲಿ ಅಯಾಚಿತವಾಗಿ ಒಂದು ಸಂಕಟವು ಒದಗಿತು. ಕ್ಷತ್ರಿಯರನ್ನು ಕೊಲ್ಲುವುದೇ ಕೆಲಸವಾಗಿದ್ದ ಪರಶುರಾಮನು ಈ ಮೆರವಣಿಗೆಯ ಗದ್ದಲವನ್ನು ಕೇಳಿ, ಅತ್ತ ಬಂದನು. ಎಲ್ಲಿಂದ ಆ ಕೊಡಲಿಯನ್ನು ಜಳಪಿಸಿ ಅತ್ತ ಬಂದನೊ ತಿಳಿಯಲಿಲ್ಲ. ಅವನು ಮಹಾದೇವನ ಶಿಷ್ಯನು. ಅವನಿಗೆ ರಾಜಕುಲದವರೆಂದರೇ ಸಿಟ್ಟು; ಅದರಲ್ಲಿಯೂ ಮಹಾದೇವನ ಧನುಸ್ಸನ್ನು ಈ ರಾಜಕುಮಾರನು ಇಕ್ಕಡಿಗೈದಿರುವನಂತೆ! ಇನ್ನು ಕೇಳಬೇಕೆ? ಸಿಟ್ಟಾಗದೆ ಉಪಾಯವಿದೆಯೆ? ಗುರುಭಕ್ತಿಯನ್ನು ತೋರಿಸುವುದಕ್ಕೂ, ಗುರುವಿಗೆ ಇವನಿಂದಾದ ಮಾನಭಂಗದ ಸೇಡು ತೀರಿಸಿಕೊಳ್ಳುವುದಕ್ಕೂ, ಉಳಿದ ಕೆಲವು ಕ್ಷತ್ರಿಯರಲ್ಲಿ ಒಬ್ಬನನ್ನು ಕೊಲ್ಲುವುದಕ್ಕೂ ಇದೇ ಸಮಯವೆಂದು, ನೆತ್ತರು ಮುಚ್ಚಿದ ಕೊಡಲಿ ಬೀಸಿ, ಪರಶುರಾಮನು ದಶರಥನ ರಥದ ಮುಂಭಾಗಕ್ಕೆ ಬಂದು, ದಾರಿಗೆ ಅಡ್ಡವಾಗಿ ನಿಂತನು. ರಥ ನಡೆಯಿತು; ದಶರಥನ ಎದೆ ಬಡೆಯಿತು; ರಾಮಚಂದ್ರನ ಸಿಟ್ಟು ಸಿಡಿಯಿತು; ಲಕ್ಷ್ಮಣನ ಹಲ್ಲು ಕಡಿಯಿತು; ಸೈನ್ಯಗಳ ಕಣ್ಣು ಒಡೆಯಿತು. ಇಂತಹನನ್ನು ಸಮಾಧಾನಗೊಳಿಸುವುದು ಹೇಗೆ? ದಶರಥನು ಅರ್ಘ್ಯವನ್ನು ಹಿಡಿದುಕೊಂಡು ರಥದಿಂದಿಳಿದು, ಪರಶುರಾಮನ ಕಾಲಬಳಿಯಲ್ಲಿ ವಿನಯದಿಂದ ತಲೆಬಾಗಿ ನಿಂತುಕೊಂಡನು. ಪರಶುರಾಮನು ಅವನನ್ನು ಕಡೆಗಣ್ಣಿನಿಂದಲೂ ನೋಡದೆ, ರಾಮಚಂದ್ರನನ್ನು ಕುರಿತು 'ದುರಾತ್ಮನೆ! ಕ್ಷತ್ರಿಯಕುಲದಲ್ಲಿ ಹುಟ್ಟಿದೆಯೆಂದು ಕೊಬ್ಬಿಕೊಂಡು, ಶಿವಧನುಸ್ಸನ್ನು ಮುರಿದು, ಭೂಮಿಯು ನಡುಗುವಂತೆ ಇಷ್ಟು ಸೈನ್ಯವನ್ನು ಕಟ್ಟಿಕೊಂಡು

ತಾನೆ ದೊಡ್ಡ ವೀರನೆಂದು ರಾಜಧಾನಿಗೆ ಮರಳುವೆಯಾ? ಕ್ಷತ್ರಿಯ ಕುಲಕ್ಕೆ ಯಮನಾಗಿರುವ ಪರಶುರಾಮನ ಹೆಸರನ್ನು ನೀನು ಕೇಳಿಯೆ ಇಲ್ಲವೆ? ಕೇಳಿ, ಬೆದರಲಿಲ್ಲವೆ? ಬೆದರಿ, ನಿನ್ನ ಕೈಯು ನಡುಗಲಿಲ್ಲವೆ? ಕ್ಷತ್ರಿಯಕುಲದವರನ್ನು ಇಪ್ಪತ್ತೊಂದು ಬಾರಿ ಕೊಂದು ಆ ಮೂರು ಅಕ್ಷರಗಳು ಅಕ್ಷರಮಾಲೆಯಿಂದಲೆ ಅಳಸಿ ಹೋಗುವ ಹಾಗೆ ನಾನು ಪ್ರಯತ್ನ ಮಾಡುತಲಿದ್ದುದು ನಿನ್ನ ಗೋಚರಕ್ಕೆ ಬಂದಿಲ್ಲವೆ? ಇರಲಿ,—ಮಾಡಿದೆ, ಮಾಡು. ಕ್ಷತ್ರಿಯನಾರೂ ಇನ್ನು ಇಲ್ಲವೆಂದು, ನನಗೆ ಅಧೀನವಾಗಿ ತಂದ ಈ ಭೂಮಂಡಲವನ್ನು, ಹಿರಿಯರ ಅಪ್ಪಣೆಯಂತೆ, ಕಶ್ಯಪಮುನಿಗಳಿಗೆ ದಾನವಾಗಿ ಕೊಟ್ಟು ಸಮಾಧಾನವಾಗಿದ್ದೆನು. ನಿನ್ನ ಧೂರ್ತತನದಿಂದ ನನ್ನ ಮನಸ್ಸಿಗೆ ಅಸಮಾಧಾನ ಉಂಟಾಯಿತಲ್ಲ! ಇದುವರೆಗೆ 'ರಾಮ'ನೆಂದರೆ ನಾನೇ, 'ಕೊಡಲಿಯರಾಮನು', ಎಂದು ತ್ರಿಲೋಕಗಳಲ್ಲಿಯೂ ತಿಳಿದುಕೊಳ್ಳುತಿದ್ದರು. ಈಗ ನೀನೂ ಇದೇ ಹೆಸರಿನಿಂದ ಮೆರೆವೆಯಂತೆ! ಆ ರಾಮನ ಗುರುವಿನ ಧನುಸ್ಸನ್ನು ಈ ರಾಮನು ಮುರಿದನೆಂದು ಜನರು ಹಿಯ್ಯಾಳಿಸಿ ಗಾದೆಯ ಮಾತಿನಂತೆ ಆಡುವುದಕ್ಕೂ ಅವಕಾಶವು ನಿನ್ನ ಉದ್ಧಟತನದಿಂದ ಉಂಟಾಯಿತಲ್ಲವೆ? ಆದರೆ, ಎಷ್ಟೆಂದರೂ ನೀನು ಮಾರೆತ್ತರದ ಬಾಲಕನು, ನಿನ್ನನ್ನು ಕೊಂದು ನನಗೆ ಯಶಸ್ಸು ಬಾರದು, ಮಾತ್ರವಲ್ಲದೆ, ಬಾಲಹತ್ಯದ ದೋಷವೂ ತಟ್ಟಬಹುದು. ಆದುದರಿಂದ, ನೀನು ನನ್ನ ಈ ಧನುಸ್ಸನ್ನು (ಧನುಸ್ಸನ್ನು ತೋರಿಸಿ) ಬಾಗಿಸಿ ಹೆದೆಯೇರಿಸಿ ಬಾಣತೊಟ್ಟು ತೋರಿಸುವೆಯಾದರೆ, ನಾನು ನಿನ್ನ ಆ ಅಪರಾಧವನ್ನು ಕ್ಷಮಿಸಿ ನಿನ್ನನ್ನು ಹೋಗಬಿಡುವೆನು. ಇಲ್ಲದಿದ್ದಲ್ಲಿ, ನಿನ್ನ ರುಂಡವು ಇನ್ನು ಮುಂಡದ ಮೇಲೆ ಇರಲಾರದೆ, ಕಳಚಿ ಭೂತಲಕ್ಕೆ ಉರುಳುವುದು!' ಎಂದು ಗರ್ಜಿಸಿದನು.

ದಶರಥರಾಜನು ನಿಂತಲ್ಲೆ ಮರಕಟ್ಟಿದನು. ರಾಮಚಂದ್ರನು ಒಂದು ಮಾತನ್ನೂ ಆಡಲಿಲ್ಲ. ಲಕ್ಷ್ಮಣನು 'ಹಾಗೆಯೆ ಮಾಡೋಣಾಗಲಿ, ಅಣ್ಣಾ!' ಎಂದು ಪ್ರೋತ್ಸಾಹಕೊಟ್ಟನು. ರಾಮಚಂದ್ರನು ಪರಶುರಾಮನ ಕೈಯಿಂದ ಅವನ ಧನುಸ್ಸನ್ನು ನಗುತ್ತ ಕಿತ್ತುಕೊಂಡು, ತೀರ ಸುಲಭವಾಗಿ, ಅದಕ್ಕೆ ಬಾಣವನ್ನು ಹೂಡಿದನು. 'ಪರಶುರಾಮಾ, ನಿನ್ನ ಅದೃಷ್ಟವು ಚೆನ್ನಾಗಿದೆ; ಅದೇ ಈ ಬಾಣವನ್ನು ನಾನು ಬಿಡುವುದಿಲ್ಲ' ಎಂದು ರಾಮನು ಜರೆದು ಆಡಿದನು.

ಈಗ, ಪರಶುರಾಮನು ಚಳಿಗಟ್ಟಿದನು. ವಿಸ್ಮಯದಿಂದ ಅವನ ಮೈಯು ಬೆದರಿ ಬೆವರಿ ತಣ್ಣಗಾಯಿತು; ಎಂತಹ ಚಮತ್ಕಾರವಿದು! 'ನಾನು ಸೋತೆನು; ನೀನೇ ಗೆದ್ದೆ!' ಎನ್ನುತ್ತ ಎತ್ತಣಿಂದಲೊ ಬಂದವನು ಮತ್ತೆತ್ತಲೊ ಸರಿದನು. ಇದು ವರೆಗೆ ಕೊಡಲಿಯ ಮೇಲೆಯೆ ಕಣ್ಣಿಟ್ಟ ದಶರಥನು, ಈಗ ರಾಮನ ಕೈಯಲ್ಲಿದ್ದ ಧನುಸ್ಸನ್ನೆ ನೋಡಿ ನಿಂತಿದ್ದನು. ಪರಶುರಾಮನು ಆಚೆಗೆ ತೆರಳಿ ಬಹಳ ಹೊತ್ತಾದ ಬಳಿಕ, ಅರೆಜೀವದಲ್ಲಿದ್ದ ಅವನಲ್ಲಿ ಮರಳಿ ಚೇತನ ತುಂಬಿತು. ಅವನು ಆಗ ಪಡೆದಂತಹ ಆನಂದ ವನ್ನು ಅವನು ಹಿಂದೆ ಎಂದೂ ಅನುಭವಿಸಿದುದಿಲ್ಲ. ಸಂತಾನವಿಲ್ಲದವನಿಗೆ ಮಕ್ಕಳಿಲ್ಲದಿರುವುದೇ ದುಃಖವು; ಹುಟ್ಟಿದ ಮಕ್ಕಳು ಸಂಕಟಗಳಿಂದ ಪಾರಾಗುವುದು ಅದೆಷ್ಟು ಆನಂದಕರ! ಪ್ರತ್ಯಕ್ಷಯಮನ ಗಂಟಲಿಂದ ಹೊರಬಿದ್ದ ಪುತ್ರರನ್ನು ಆಲಿಂಗಿಸಿ, ಪರಿವಾರದೊಂದಿಗೆ ರಥಗಳನ್ನು ಮುನ್ನಡೆಯಿಸಿ, ಅವನು ಅಯೋಧ್ಯೆಯನ್ನು ಮರಳಿ ಸೇರಿದನು.

> ಕಲಶ ಕನ್ನಡಿ ತೋರಣದ ಹೊಂ
> ದಳಿಗೆಯಾರತಿಗಳ ಸುಲಲನಾ
> ವಳಿಯ ಮಂಗಳಪಾಠಕರ ನರ್ತನದ ನಾರಿಯರ॥
> ಉಲಿವವಾದ್ಯದ ಲೆಡಬಲದ ಹೆ
> ಕ್ಕಳದ ನೋಟಕಜನದಲಾ ನೃಪ
> ಕುಲಶಿರೋಮಣಿ ಹೊಕ್ಕನನುಪಮ ರಾಜಮಂದಿರವ.

ರಾಜಧಾನಿಯಲ್ಲಿ ಪರಮಾನಂದವು ನೆರೆಯ ನೀರಿನಂತೆ ಹರಿಯಲು, ರಾಜವತ್ಸಲರಾದ ಪ್ರಜೆಗಳು ಅದರಲ್ಲಿ ತೇಲಾಡುತಿದ್ದರು. ಬಹು ದಿನಗಳ ತನಕ ಅಯೋಧ್ಯೆಯಲ್ಲಿ ಮಹೋತ್ಸವಗಳು ನಡೆದುವು. ಪ್ರತಿಯೊಬ್ಬನ ಬಾಯಿಯಲ್ಲಿಯೂ 'ಸೀತಾ—ರಾಮ'—'ಸೀತಾ—ರಾಮ.'



# ೨. ಅಯೋಧ್ಯಾಕಾಂಡ

ಇನ್ನು ದಶರಥ ಮಹಾರಾಯನಿಗೆ ಕಡಿಮೆಯೇನಿದೆ? ಮಗಂದಿರಾದರು; ಮಗಂದಿರು ಬುದ್ಧಿವಂತರೂ ಆದರು; ಜಗತ್ತಿನಲ್ಲಿ ಅವರಂತಹ ರಾಜಪುತ್ರರೇ ಇಲ್ಲವೆಂದೂ ಪ್ರಮಾಣವಾಯಿತು. ಮಗಂದಿರಿಗೆ ವಿವಾಹವಾಯಿತು. ಇನ್ನು ಅವನ ವಂಶವು ಉದ್ಧಾರವಾಯಿತು. ಈ ಲೋಕದಲ್ಲಿ ಅನುಭವಿಸಬಹುದಾದ ಎಲ್ಲ ಸುಖವನ್ನು ಅವನು ಅನುಭವಿಸಿದನು. ವಯಸ್ಸು ಮೀರುತ್ತಲಿದೆ. ಇನ್ನು ರಾಜ್ಯಭಾರವನ್ನು ಹೊರುವ ಚಿಂತೆಯು ಅವನಿಗೇತಕ್ಕೆ ಬೇಕು? ರಾಜ್ಯವನ್ನು ಮಕ್ಕಳಿಗೆ ಕೊಟ್ಟು, ತಪೋವನಗಳಿಗೆ ತೆರಳಿ, ದೇವರ ಧ್ಯಾನದಲ್ಲಿ ಉಳಿದ ಕಾಲವನ್ನು ಕಳೆಯಬೇಕೆಂದು ಅವನು ನಿಶ್ಚಯಮಾಡಿಕೊಂಡನು.

ಹಿರೇ ಮಗನಾದ ರಾಮಚಂದ್ರನಿಗೇ ಯುವರಾಜಪಟ್ಟವನ್ನು ಕಟ್ಟುವುದೆಂದು ಮನಸ್ಸು ಮಾಡಿದನು. ರಾಜಸಭೆಗೆ ಎಲ್ಲ ಮಕ್ಕಳನ್ನು ಕರೆಯಿಸಿ, ತನ್ನ ಬಳಿಯ ಆಸನಗಳಲ್ಲಿ ಅವರನ್ನು ಕುಳ್ಳಿರಿಸಿ, ಮಂತ್ರಿಪುರೋಹಿತರಿಗೆ ತನ್ನ ಮನಸ್ಸಿನ ಅಭಿಪ್ರಾಯವನ್ನು ತಿಳುಹಿದನು. ಬಳಿಕ ರಾಮಚಂದ್ರನ ಚಂದ್ರಮುಖವನ್ನು ನೋಡಿ, 'ನಾವು ಸೂರ್ಯವಂಶದ ಅರಸುಗಳು. ನಮ್ಮ ವಿಚಾರ—ಉಚ್ಚಾರ—ಪ್ರಚಾರಗಳು ಧರ್ಮಕ್ಕೆ ಸರಿಯಾದುವೆಂದು ಈ ವಂಶಕ್ಕೆ ಹೆಸರಿರುವುದು. ಆ ಹೆಸರಿಗೆ ಇನ್ನೂ ಒಪ್ಪಕೊಡುವ ಹಾಗೆ ನಡೆದುಕೊಂಡು, ಈ ರಾಜ್ಯವನ್ನು ಪಾಲಿಸುವುದಕ್ಕೆ ನೀನೆ ಯೋಗ್ಯನು. ರಾಜನೀತಿ, ಸಮಾಜನೀತಿ, ಅರ್ಥನೀತಿ, ಯುದ್ಧನೀತಿ ಎಲ್ಲವನ್ನೂ ನೀನು ಸಾಂಗವಾಗಿ ಕಲಿತುಕೊಂಡಿರುವೆ. ಹಣೆಯಲ್ಲೊಂದು ಕಣ್ಣು ಹುಟ್ಟುವ ಹಾಗೆ, ನನ್ನ ಅದೃಷ್ಟವು ಫಲಿಸಿ, ನಿನ್ನಂತಹ ಪುತ್ರನು ನನ್ನಲ್ಲಿ ಉಂಟಾದನು. ಇನ್ನು ನನ್ನ ಸಾಮ್ರಾಜ್ಯವನ್ನು ನೀನು ಪಡೆದು, ತಪೋರಾಜ್ಯಕ್ಕೆ ನಾನು ತೆರಳ ಬಹುದೆನ್ನುವಂತೆ ನನಗೆ ಅನುಕೂಲನಾಗು. ನಿನ್ನ ಹಣೆಗೆ ಇರುವ ಬೊಟ್ಟಿನಂತೆ, ನಮ್ಮ ವಂಶಕ್ಕೆ ನೀನೆ ತಿಲಕನಾಗು. ನಾಳೆಗೆ ನಿನಗೆ ಯುವರಾಜಪಟ್ಟವನ್ನು ಕಟ್ಟುವೆನು' ಎಂದನು. ಸಭೆಯವರೆಲ್ಲರೂ

ಸಂತೋಷದಿಂದ ಎದ್ದು ನಿಂತು, 'ರಾಮಚಂದ್ರನಿಗೆ ಜಯವಾಗಲಿ!' ಎಂದು ಧ್ವನಿಮಾಡಿದರು. ರಾಮನ ಸೋದರರಾದ ಲಕ್ಷ್ಮಣ ಶತ್ರುಘ್ನರು ಅಣ್ಣನ ಸೇವೆಯನ್ನು ಮಾಡುವುದಕ್ಕೆ ತವಕಗೊಂಡರು. 'ರಾಜ್ಯವನ್ನಾಳುವುದೂ ಒಂದು ಬಗೆಯ ಸೇವೆ; ರಾಜನ ಸೇವೆಯೂ ಅಂತಹದೆ' ಎಂದು ಅವರು ನುಡಿದರು. ಪ್ರಜೆಗಳೆಲ್ಲರೂ ಅಯೋಧ್ಯೆಯನ್ನು ಸಿಂಗರಿಸಿ ವಸಂತ ಮಂಟಪದಂತೆ ಮಾಡಿದರು. ನಾಳೆಗೇ ಅಭಿಷೇಕವಾಗುವುದಲ್ಲವೆ? ರಾಣಿಗಳೂ ದೇವತಾಪೂಜೆಗಳನ್ನು ಮಾಡಿದರು. ರಾಜ್ಯದಲ್ಲಿ ಅವಸರ ಅವಸರವಾಗಿ ಬೇರೆ ಬೇರೆ ರಾಜರುಗಳೂ ಋಷಿಗಳೂ ಬಂದೊದಗಿದರು. ಭರತನು ತನ್ನ ಸೋದರಮಾವನಲ್ಲಿಗೆ ತೆರಳಿದವನು ಇನ್ನೂ ಬಂದಿರಲಿಲ್ಲ.

ಹೀಗೆ ಅಭಿಷೇಕಕ್ಕೆ ಎಲ್ಲವೂ ಸಿದ್ಧವಾಯಿತು. ಅಂತಃಪುರದಲ್ಲಿಯೂ ಗದ್ದಲಬಿದ್ದಿದೆ. ಕೌಸಲ್ಯೆಯು ರಾಮನಿಗೆ ದೇವತೆಗಳ ಆಶೀರ್ವಾದ ದೊರೆವ ವ್ರತವನ್ನು ಮಾಡುತಲಿದ್ದಾಳೆ. ಸೀತಾದೇವಿಯು ಅತ್ತೆಯೊಡನೆ ಪೂಜಾ ಸನ್ನಾಹವನ್ನು ಮಾಡುತಲಿದ್ದಾಳೆ. ರಾಮ-ಲಕ್ಷ್ಮಣರೊಳಗೆ ವಾತ್ಸಲ್ಯವು ಹೆಚ್ಚಾಗಿರುವಂತೆ, ಕೌಸಲ್ಯೆ ಸುಮಿತ್ರೆಯರೊಳಗೆ ಭಾವ ವಿದ್ದುದರಿಂದ, ಸುಮಿತ್ರೆಯೂ ಅಲ್ಲೇ ನೈವೇದ್ಯ ಸನ್ನಾಹಮಾಡುತಲಿದ್ದಾಳೆ, ಕೈಕಯಿಯು ಅಲ್ಲಿ ಇಲ್ಲ. ವೃದ್ಧನಾದ ರಾಜನ ಪ್ರೀತಿಯ ರಾಣಿಯಲ್ಲವೆ? ಅವಳು ತನ್ನ ಸಿಂಗಾರದಲ್ಲೆ ಇರುವಳು. ಅವಳಿಗೆ ಅಭಿಷೇಕ ವಾರ್ತೆಯು ತಲಪಿಲ್ಲ. ರಾಮನ ಮೇಲೆ ಅವಳ ಪ್ರೀತಿಯು ಕಡಿಮೆಯಾಗಿಲ್ಲ; ಆದರೆ ತನ್ನ ಮಂದಿರದಲ್ಲೆ ಇದ್ದಳಾದುದರಿಂದ, ಅವಳು ಈ ವೃತ್ತಾಂತವನ್ನು ಕೇಳಿರಲಿಲ್ಲ. ಅಂತಃಪುರದಲ್ಲಿ ದಾಸೀ ಜನಗಳೆಲ್ಲರೂ ಮಂದಿರ ಶೃಂಗಾರದಲ್ಲೆ ಮಗ್ನರು. ಕೈಕಯಿಯ ಮಂಥರೆ ಎಂಬ ದಾಸಿಯು ಕುಬ್ಜೆಯಾದುದರಿಂದ ಯಾವ ಕೆಲಸವನ್ನೂ ಮಾಡಲು ಯೋಗ್ಯತೆಯಿಲ್ಲದೆ, ಮಿಕ್ಕ ಯಾರೊಡನೆಯೂ ಮಾತಾಡಲೂ ಅವರಿಲ್ಲದ ಕಾರಣ, ತನ್ನ ಒಡತಿ ಇದ್ದಲ್ಲಿಗೇ ಬಂದಳು.

ಮಂಥರೆಯ ದೇಹವು ಹೇಗೆ ವಿಕಾರವುಳ್ಳದೊ, ಹಾಗೆಯೆ ಅವಳ ಮನಸ್ಸೂ ವಿಕಾರಮಯ. ಎಲ್ಲ ರಾಣಿಗಳ ದಾಸಿಯರು ಸಂಭ್ರಮದಿಂದಿರುವರು. ತಾನು ಮಾತ್ರ ಯಾವ ಕೆಲಸಕ್ಕೂ ಬಾರದಾದೆನೆ? ಅದರಲ್ಲೂ

ಕೌಸಲ್ಯೆಯ ದಾಸಿಯರಂತೂ, ದೇವಲೋಕದಿಂದ ಬಂದವರಂತೆ, ಅತ್ತಿತ್ತ ನೋಡುವುದಿಲ್ಲ. ಸುಮಿತ್ರೆಯ ದಾಸಿಯರೂ ಅವರಂತೆಯೇ ಗಡಿಬಿಡಿ ಯಲ್ಲಿ ಬಿದ್ದಿರುವರು. ಮಂಥರೆಗೆ ತನ್ನಲ್ಲಿ ತನಗೇ ಧಿಕ್ಕಾರವುಂಟಾಯಿತು. ಈ ರೀತಿ ಅವಳು ದೀನೆಯಾಗಲು ಕಾರಣವೇನು? ರಾಮನಿಗೆ ಅಭಿ ಷೇಕವಾಗುವುದೆಂದು ಅಲ್ಲವೇ? ಅವಳು ಕೈಕಯಿಯ ದಾಸಿ,— ಕೈಕಯಿಯು ದಶರಥನಿಗೆ ಅತಿ ಪ್ರಿಯಳು. ಅವಳ ಪುತ್ರನಾದ ಭರತನು ಸಾಮಾನ್ಯನಲ್ಲ. ಭರತನಿಗೆ ಯುವರಾಜಪಟ್ಟವನ್ನು ಕಟ್ಟುವುದಾಗಿದ್ದರೆ, ಇಂದು ಮಂಥರೆಯ ವೈಭವವು ಎಷ್ಟಾಗುತಿದ್ದಿತು! ಹಾ, ಆ ದಿನವು ಇನ್ನು ಬರುವುದೆ? ಬರುವುದೇ, ಬಾರದೇ? ಕೈಕಯಿಯೆ ರಾಜನ ಪ್ರಿಯಳೆಂದಾ ದರೆ ಏತಕ್ಕೆ ಬಾರದು? ಅವಳೇನು ಹೇಳುವಳೊ ನೋಡೋಣವೆಂದು, ಮಂಥರೆಯು ಆ ಕಿರೇರಾಣಿಯ ಮಂದಿರಕ್ಕೆ ಬಂದಳು.

ರಾಮನಿಗೆ ಅಭಿಷೇಕವೆಂಬುವ ವಾರ್ತೆಯು ಮಂಥರೆಯ ಪ್ರಾಣ ವನ್ನು ಚುಚ್ಚಿದೆ. ಅವಳು ಮತ್ಸರಗೊಂಡು ಬಿಸುಸುಯ್ಯುತ್ತ, ಕೈಕಯಿ ಯನ್ನು ಕುರಿತು,—'ಒಡತಿಯರೆ! ನೀವೂ ಉತ್ಸವಕ್ಕೆ ಸಿದ್ಧರಾಗುವುದೆ? ಯಾರ ಆನಂದಕ್ಕಾಗಿ ನಿಮ್ಮ ಅಲಂಕಾರವು? ರಾಜನು ಕೌಸಲ್ಯೆಗೇ ಒಲಿದನು. ನೀವು ಅವಳನ್ನು 'ಅಕ್ಕಾ—ಅಕ್ಕಾ' ಎನ್ನುತಲಿದ್ದೀರಿ; ಇನ್ನು ನನ್ನಂತೆಯೆ ಕೌಸಲ್ಯಾದೇವಿಯನ್ನು ನೀವು 'ಅಮ್ಮಾ' ಎನ್ನಬೇಕಾಗಿದೆ. ನಾನಾದರೆ ಇಂತಹ ಅವಮಾನಕ್ಕಿಂತ ಮರಣವೇ ಮೊದಲೆಂದು, ನಾಲಗೆ ಹೊರಕ್ಕೆಳೆದು ಕಡಿದುಕೊಂಡು ಮಡಿಯುತಿದ್ದೆನು. ನಿಮಗೆ ಒಂದೂ ತಿಳಿದಿಲ್ಲ. ಭರತನು ಮಾವನ ಮನೆಗೆ ಹೋಗಿರಲಿ! ಇಲ್ಲಿ ನಾಳೆಗೇ ರಾಮಚಂದ್ರನಿಗೆ ಪಟ್ಟವಾಗುವುದು. ಭರತನು ಮಾವನಲ್ಲಿಯೆ ಉಳಿಯಲಿ, ಇಲ್ಲಿಗೆ ಬಂದು ಅವನೇಕೆ ರಾಮನ,—ಕೌಸಲ್ಯಾರಾಣಿಯ ಮಗನ—ಕಾಲ ದೂಳನ್ನು ಜಾಡಿಸುತಿರಬೇಕು? ಅಹ! ನೀವಾದರೂ ನೋಡುವಿರಿ,—ರಾಮ ನಿಗೆ ಅಭಿಷೇಕವಾದ ಬಳಿಕ ಆ ದೊಡ್ಡರಾಣಿಯ ದಾಸಿಯರು ನಿಮ್ಮನ್ನು ಕೊರಳಿಗೆ ಹಿಡಿದು, ಅಂತಃಪುರದ ಹೊರಕ್ಕೆ ದೊಬ್ಬುವರು. ನಿಮ್ಮಂತಹ ರಾಣಿಯರ ಪಾಡೇ ಇಂತಹದಾಗುವುದು; ಎಂದ ಬಳಿಕ, ನನ್ನಂತಹರ ಗತಿಯೇನಾಗುವುದು? ನಿಮ್ಮ ವಿವಾಹದ ದಿನ ನಿಮ್ಮೊಡನೆ ಇತ್ತ ಬಂದು

ನಿಮ್ಮ ಸೌಭಾಗ್ಯವನ್ನು ಕಂಡಿದ್ದ ನಾನು, ಇನ್ನು ಈ ಕಣ್ಣುಗಳಿಂದ ನಿಮ್ಮ ದುರವಸ್ಥೆಯನ್ನು ನೋಡುವುದಕ್ಕೆ ಇಲ್ಲಿ ಉಳಿಯುವೆನೆ? ಈಗಲೆ ಹೊರಡುವೆನು. ಕೌಸಲ್ಯೆಯು ರಾಜನ ತಾಯಿಯಾಗಿಯೂ, ನೀವು ಅವಳ ಹಿಂದೆ ನಾಯಿಯಂತಾಗಿಯೂ ಇರಬೇಕಾಗುವ ದುರ್ಭಾಗ್ಯವನ್ನು ನಾನೆಂತು ನೋಡಿ ಸಹಿಸಲಿ? ಇಲ್ಲಿರುವೆನಾದರೆ ನನ್ನೊಡನೆ ನನ್ನಂತೆಯೆ ದಾಸಿಯಾಗಿ ನೀವು ಹೊರಗುಡಿಗಳಲ್ಲಿ ಬಿದ್ದುಕೊಳ್ಳಬೇಕಾಗುವುದಲ್ಲವೇ? ಅಂತಹ ಜೀವನವನ್ನು ಸುಡಲಿ. ಆಗುವಷ್ಟು ಸೊಗಸಾಗಿ, ಎಲ್ಲ ಅಲಂಕಾರಗಳನ್ನು ಈಗ ಬೆಳಗಾಗುವ ತನಕ ತೊಟ್ಟುಕೊಳ್ಳಿರಿ; ಅನಂತರ ನೀವೆಲ್ಲಿಯೊ, ಅಲಂಕಾರಗಳೆಲ್ಲಿಯೊ, ಯಾರು ತಾನೆ ಬಲ್ಲರು? ನಾಳೆಯ ಸೂರ್ಯನು ಮೂಡಿದ ಕೂಡಲೆ, ನಿಮ್ಮ ಭಾಗ್ಯವು ಕಂತುವುದು!' ಎಂದು ಮೋರೆಯನ್ನು ಓರೆಮಾಡಿ ಹರಟಿದಳು.

ಈ ಸುಟ್ಟಮೋರೆಯ ತೊತ್ತು ಇಷ್ಟನ್ನೂ ಹೇಳಿತಲ್ಲ! ಗರ್ವದ ಕೈಕಯಿಯು, ಇವಳ ಒಂದೊಂದು ಮಾತನ್ನು ಕೇಳುತಿದ್ದಂತೆ, ಚಂಚಲ ಚಿತ್ತಳಾದಳು. ಇವಳಲ್ಲಿದ್ದ ಮತ್ಸರವು ಅವಳಲ್ಲಿಯೂ ಹೊಗೆದು ಎದ್ದಿತು. ಮಂಥರೆಯು ಅಳುತಲಿದ್ದಂತೆ, ಅದು ಬೆಳೆಯಿತು. ಅವಳು ಬಿಸುಸುಯ್ದಂತೆ, ಬೆಳೆವ ಮತ್ಸರದ ಬೆಂಕಿಗೆ ಎಣ್ಣೆ ಹೊಯಿದಂತಾಯಿತು. ಕೈಕಯಿಯ ಪ್ರಾಣವು ಆಗ ಬೆಂದು ಕುದಿಯಿತು. ಅವಳೂ ಅತ್ತುಕೊಂಡಳು. ಒಂದೇ ಗಳಿಗೆಯ ಹಿಂದೆ ರಾಮನನ್ನು ಭರತನಿಗಿಂತಲೂ ಹೆಚ್ಚಾಗಿ ಪ್ರೀತಿಸುವವಳೂ, ಕೌಸಲ್ಯೆಯನ್ನು ಅಕ್ಕನೆಂದು ಮನ್ನಿಸುವವಳೂ ಆದ ಕೈಕಯಿಯು, ಈಗ ರಾಮನನ್ನೂ ಕೌಸಲ್ಯೆಯನ್ನೂ ತನ್ನ ಭಾಗ್ಯಕ್ಕೆ ಮುತ್ತಿದ ಬ್ರಹ್ಮರಾಕ್ಷಸ—ಮಹಾಮಾರಿಗಳಂತೆ ಕಂಡಳು. 'ಎಲ್ಲವನ್ನೂ ಬಿಡಿಸಿ ಹೇಳಿದ ಮಂಥರೆಯೆ ತನ್ನ ಭಾಗ್ಯದೇವತೆ,' ಎಂದುಕೊಂಡಳು. 'ಆದರೆ ಈಗ ತಾನೆ, ಘಟನೆಗಳ ಪ್ರವಾಹವನ್ನು ಹೇಗೆ ತಡೆಯಬಹುದು? ಎಲ್ಲವೂ ಸಿದ್ಧವಾಗಿದೆಯಲ್ಲ!' ಎಂದು ಅವಳು ದಾಸಿಯನ್ನು ಕೇಳಿದಳು.

ಕುಬ್ಜೆಯೇ ಕುತಂತ್ರಿ! 'ರಾಜರು ಈಗಲೇ ಇತ್ತ ಬರುವರು. ಬಂದವರು ಇಲ್ಲಿಂದ ಹೊರಹೋಗದಂತೆ ಆಗಬೇಕು; ಅವರು ಬರುವಾಗ, ಮೈಯ ಅಲಂಕಾರಗಳನ್ನೆಲ್ಲ ಕಳಚಿ ಚೆಲ್ಲಿ, ಭೂತಹಿಡಿದಂತೆ ಅಪಾರ

ದುಃಖದಿಂದ ನಡುಗಿ ಬಿದ್ದಿರಬೇಕು. ಪ್ರೀತಿಯ ರಾಣಿ ಹೀಗಾದಳೆಂದು ಸಮಾಧಾನಕ್ಕೆ 'ಬೇಕಾಗುವುದನ್ನು ಕೇಳೆ'ನ್ನುವರು. ಆಗ ಸೂರ್ಯ ವಂಶದ ಅರಸುಗಳು ಸತ್ಯಪ್ರತಿಜ್ಞರೆಂದು ನೆನಪು ಹುಟ್ಟಿಸಿ, ಬಹಳ ಹೊತ್ತು ಹೇಳದೆ, ನಿಧಾನವಾಗಿ, ಎಚ್ಚರಿಸಿ, ಬೇಕಾದುದನ್ನು ಬೇಡಿಕೊಂಡರಾಯಿತು. ಮೀರುವರೆ? ಕೂಡಲೆ ಅದೃಷ್ಟವೇ ತಿರುಗುವುದು. ಆ ಬಳಿಕ ದಾಸಿಯ ಮಾತಿನ ಜೋರನ್ನು ನೋಡಬಹುದು!' ಎಂದಳು. ಕುಬ್ಜೆಯು ಇಷ್ಟು ದುರ್ಬುದ್ಧಿಯನ್ನು ಬೋಧಿಸಿ, ರೋದಿಸಿ, ಮನೆಯ ಹೊರಕ್ಕೆ ಬಂದಳು.

ರಾಜನು ಅಷ್ಟರಲ್ಲೆ ಕೈಕಯಿಯನ್ನು ಕಾಣಬಂದನು. ಪ್ರೀತಿಯ ರಾಣಿಯು ಇಂತಹ ಶುಭದಿನಗಳಲ್ಲಿ ಹೀಗೆ ವಿಕಾರವಾಗಿ ಬಿದ್ದಿರುವುದನ್ನು ನೋಡಿ ಅವನು ಕಣ್ಣುಕತ್ತಲನ್ನೆ ಕಂಡನು. ದೊಡ್ಡ ಉಲ್ಕೆಯಂತೆ ಅವಳು ಭೂತಲದಲ್ಲಿ ಬಿದ್ದುಕೊಂಡಿದ್ದಳು.

> ಲಲನೆಯಿದ್ದಳು ಮಲಿನಮಯ ಪು-
> ತ್ಥಳಿಯವೊಲು, ಹೇಮಂತಕಾಲದ
> ನಳಿನಿಯಂತೆ, ನಿದಾಘದೆಳೆಲತೆಯಂತೆ, ರಾಹುವಿನ।
> ಎಳತಟದ ಶಶಿರೇಖೆಯಂತು
> ಜ್ವಲತೆಗುಂದಿದ ಮುಖದಕಾಂತಿಯ
> ಹಳಹಳಿಕೆಗೊಳಗಾದ ಕೈಕೆಯ ಕಂಡನಾ ಭೂಪ ||

ಅವನು ಮನಸ್ಸಿನಲ್ಲಿ ತುಂಬ ಕಳವಳಗೊಂಡು, 'ರಾಜ್ಯವೆಲ್ಲವೂ ಆನಂದಸಾಗರದಲ್ಲಿ ತೇಲುತ್ತಿರುವಾಗ, ತನ್ನ ರಾಣಿಯೇ ಹೀಗಿರುವು ದೇನೆ'ಂದು ಅವಳನ್ನು ವಿಚಾರಿಸಿದನು; 'ಯಾರೂ ಅವಮಾನಿಸಿದರೇ? ಅವಿಧೇಯರಾದರೇ? ಮನಸ್ಸಿನಲ್ಲಿ ಏನೊಂದು ಆತಂಕವಿದೆಯೇ?' ಎಂದು ಹೇಳಿದನು. ಕೈಕಯಿಯು ದಾಸಿಯ ಮಾತನ್ನು ಕೇಳಿದವಳಲ್ಲವೆ? ಆಳಿನ ಮಾತು ಕೇಳಿ ಹಾಳಾಗದವರಾರು? ಇವಳು ತನ್ನ ದಾಸಿಗೆ, ತಾನೇ ದಾಸಿಯಾದಳು. ಮೆಲ್ಲನೆ ಬಾಯಿ ತೆರೆದಂತೆ ಮಾಡಿದಳು; ಹೇಳು ವಳೆಂಬಂತೆ ತೋರಿಸಿದಳು. ರಾಜನಲ್ಲಿ ಇನ್ನಷ್ಟು ಕೂತೂಹಲವೆದ್ದಿತು. ಅವಳಲ್ಲಿ ತನಗಿದ್ದ ಅಪಾರ ಪ್ರೀತಿಯು ಸತ್ಯವಾದುದೆಂದು ತೋರಿಸಲು, ರಾಮನಾಣೆಯಿಟ್ಟು ಅವಳು ಹೇಳುವಂತೆ ಮಾಡುವೆನೆಂದನು. ಆದರೂ

ಅವಳು ಬಾಯಿಬಿಟ್ಟು ಹೇಳುವಳೆ? ಬೇಕಾದುದನ್ನು ಮಾಡಿಕೊಡುವೆನೆಂದು ರಾಜನು ಹೇಳಲು, ಆಗ ತಾನೇ ಮೊಗತಿರುಹಿ,—'ಎರಡೇ ಮಾತು; ಭರತನಿಗೆ ನಾಳೆ ಪಟ್ಟವಾಗಲಿ; ನಾನು ಎಲ್ಲ ರಾಣಿಯರಿಗಿಂತ ಹೆಚ್ಚಾಗಿ ತಮ್ಮಲ್ಲಿ ಇಟ್ಟ ಪ್ರೀತಿಯ ಫಲವಾಗಿ, ನನ್ನಲ್ಲಿ ಹುಟ್ಟಿದ ಕುಮಾರನು ರಾಜ್ಯವನ್ನಾಳಬೇಕು. ಅವನಿಂದ ರಾಜ್ಯವಾಳುವುದು ಸುಲಭವಾಗುವ ಹಾಗೆಯೂ, ಸೋದರವರ್ಗಕ್ಕೂ ಪ್ರಜೆಗಳಿಗೂ ಸಮಧಾನವಾಗುವಂತೆ ಯೂ, ಮಹಾವೀರನೆನಿಸಿ ರಾಕ್ಷಸರನ್ನೂ ಸಂಹರಿಸಬಲ್ಲ ರಾಮನು, ಹದಿನಾಲ್ಕು ವರ್ಷ ವನವನಗಳಲ್ಲಿ ತಿರುಗುತಿರಲಿ; ಇಷ್ಟೆ ನನ್ನ ಮನಸ್ಸಿನ ಬಯಕೆ' ಎಂದಳು. ವಿಷವು ಅಣುಮಾತ್ರವಿದ್ದರೆ ಸಾಕಾಗುವುದಲ್ಲವೆ?

ಈ ಬೇಡಿಕೆಯು, ಅದನ್ನು ಕೇಳಿದ ರಾಜನ ಕೈಗೆ ಬಿಗಿದ ಬೇಡಿ ಯಾಯಿತು. ಅವಳ ಮಾತುಗಳೆಂಬ ಸಿಡಿಲು ಕಿವಿಯೊಳಗೆ ಹೊಕ್ಕಿದಂತಾಗಿ ಅವನು ಮೂರ್ಛಿತನಾಗಿ ನೆಲಕಚ್ಚಿ ಬಿದ್ದುಕೊಂಡನು. ಇಂತಹ ಅನಿಷ್ಟ ವನ್ನು, ಅನ್ಯಾಯವನ್ನು, ಪತಿವಿರೋಧವಾದುದನ್ನು, ಮಾಡಲಾಗದುದನ್ನು, ಇವಳು ಆಡಲೂ ಹೇಸಲಿಲ್ಲ. ಒಡೆಯನು ಆಳಿಗೆ ಆಳಾದರೆ ಅವನೇ ಮಡ್ಡೆಯನಲ್ಲವೆ ? ಕೈಕಯಿಯು ಇಂತಹದನ್ನು ಕೇಳುವಳೆಂದು ಯಾರು ತಾನೆ ತಿಳಿದಿದ್ದರು ? ರಾಜನು, ತಿಳಿಯುವ ಮೊದಲೇ ಮಾತುಕೊಟ್ಟು ಮೋಸ ಹೋದನು. ಅವನು ಕಣ್ಣೀರು ಮಿಡಿದು, 'ಬೇಕಾದನ್ನು ಕೊಡು ವೆನು, ಇಂತಹ ಚಲವನ್ನು ಬಿಡು' ಎಂದರೆ, ಅವಳು ಮರುಮಾತೆತ್ತಲಿಲ್ಲ. 'ನೀವಾಡಿದ ಮಾತು, ಬೇಕಾದರೆ ಹಿಂದೆಗೆಯಿರಿ. ರಾಮನೇನೆನ್ನುವನೋ ನೋಡುವೆನು' ಎಂದಿಷ್ಟೆ ಆಡಿದಳು. ರಾಜನು ಭ್ರಮೆಗೊಂಡು ನಿರಾಶೆ ಯಿಂದ ಕೊನೆಗೆ ರಾಣಿಯ ಕಾಲಿಗೆ ಬೀಳಲೂ ಹೇಸಲಿಲ್ಲ. ಅವಳ ಮನಸ್ಸು ಕರಗಲೂ ಇಲ್ಲ, ಕದಲಲೂ ಇಲ್ಲ, ಬದಲಲೂ ಇಲ್ಲ. ಅವಳು ಎದ್ದು ಕುಳಿತಳು; ರಾಜನು ಮಾತ್ರ ಕಂಬನಿ ಸುರಿಸುತ್ತಾ ರಾತ್ರಿಯೆಲ್ಲ ಅಲ್ಲೇ ಬಿದ್ದು ಹೊರಳಾಡಿದನು.

ಇದೆಲ್ಲವೂ ಇನ್ನಾರಿಗೂ ತಿಳಿದಿದ್ದಿತೆ ? ಇಲ್ಲ. ಎಲ್ಲವೂ ಸಾಂಗವಾಗಿ ನೆರವೇರುವ ಹಾಗೆ ಎಲ್ಲರೂ ಪೇಚಾಡುತಲಿದ್ದು ರಾತ್ರಿಯನ್ನು ಕಳೆದರು. ರಾಮಚಂದ್ರನು ತನಗೆ ನಾಳೆಗೊದಗುವ ಕಾರ್ಯಭಾರವನ್ನು ಯೋಚಿಸಿಯೆ

ಬಹಳ ರಾತ್ರಿಯಾಗುವ ತನಕವೂ ದೇವಧ್ಯಾನ ವಿಚಾರಪರನಾಗಿದ್ದನು. ಸೀತಾದೇವಿಯು ಅತ್ತೆಯುವರೊಡನೆ ಪೂಜಾಕಾರ್ಯದಲ್ಲಿದ್ದಳು. ಬೆಳಗ್ಗಿನ ಜಾವಕ್ಕೆ ಹಾಳು ಕನಸನ್ನು ರಾಮನು ಕಂಡನು. ಹೆಂಡತಿಯೊಡನೆ ತಾನು ಕಾಡಿನಲ್ಲಿ ಅಲೆದಾಡಿದಂತೆ ಕಂಡು ಬೆದರಿ ಬೆವರಿದನು. ಎಚ್ಚರಗೊಳುವಾಗಲೆ, ಕೋಳಿಕೂಗಿ ಬೆಳಗಾಯಿತು. ವಸಿಷ್ಠದೇವನೂ ಸುಮಂತ್ರನೂ ಅಲ್ಲಿಗೆ ಬಂದು, ಅವನನ್ನು ಎಬ್ಬಿಸಿ, ಮಂಗಲಸ್ನಾನವನ್ನು ಮಾಡಿಸಿದರು. ಅವನು ವಸಿಷ್ಠದೇವನಿಗೆ ತನ್ನ ಕನಸನ್ನು ಅರುಹಿದನು. ಕೆಲದಿನ ಕಷ್ಟವಾಗಿ, ನಂತರ ಸುಖವು ಯಥೇಷ್ಟವಾಗುವುದೆಂದು ಅದರ ಫಲವನ್ನು ಅವನು ತಿಳುಹಿದನು. ರಾಮನ ಮಂದಿರದಿಂದ ಮೆರವಣಿಗೆ ಹೊರಟಿತು. ಸೀತಾಸಮೇತನಾಗಿ ಮಿಥಿಲೆಯಿಂದ ಬಂದಂದು ನಡೆದ ಉತ್ಸವಕ್ಕಿಂತಲೂ ಇದೇ ಹೆಚ್ಚಿನದಾಗಿದ್ದಿತು. ಮೆರವಣಿಗೆಯು ರಾಜಮಂದಿರಕ್ಕೆ ಬಂದಿತು. ರಾಜನಿಲ್ಲ. ಅಂತಃಪುರಕ್ಕೆ ಸುಮಂತ್ರನು ಧಾವಿಸಿದನು. ರಾಜನು ಅಲ್ಲೇ ಬಿದ್ದುಕೊಂಡು ಇನ್ನೂ ಅತ್ತು ಅತ್ತು ಸತ್ತಂತಾಗಿದ್ದನು. ವಿಚಾರಿಸಿದರೆ ಉತ್ತರವಿಲ್ಲ. ಬಹಳ ಹೊತ್ತು ಹೀಗೆಯೇ ಕಳೆದರೆ, ಅಭಿಷೇಕದ ಮುಹೂರ್ತವು ತಪ್ಪುವುದೆಂದು ಎಚ್ಚರಗೊಂಡು, ರಾಮನು ತಂದೆಯನ್ನು ವಂದಿಸಲು ಅಲ್ಲಿಗೆ ತಾನೇ ಬಂದನು. ಬಂದು ನೋಡಿದನು. ತಂದೆಯ ಸಂಕಟವನ್ನು ತಿಳಿದನು. ಅವನ ಮೈಯೆಲ್ಲ ದೂಳಿನಿಂದ ಮುಚ್ಚಿದ್ದಿತು. ನಾಲಗೆ ಆಡಲಾರದು. ಕಣ್ಣು ನೋಡಲಾರದು. ರಾಮನು ನಿಂತಲ್ಲೆ ಕರಗಿದನು. ಕೈಕಯಿಯನ್ನು ವಂದಿಸಿ, 'ಈ ಪ್ರಕಾರವಾಗಲು ಕಾರಣವೇನೆ'ಂದನು. ಅವಳು 'ವತ್ಸಾ! ರಾಜರಿಗೇನೂ ಅಸೌಖ್ಯವಾಗಿಲ್ಲ. ನ್ಯಾಯವಿರಲಿ, ಅನ್ಯಾಯವಿರಲಿ, ನಾನು ಆಡುವುದನ್ನು ನೀನು ಮಾಡುವೆಯೆಂದು ಮಾತು ಕೊಡುವೆಯಾದರೆ,—ರಾಜರ ಮನೋಭಿಪ್ರಾಯವನ್ನು ನಾನೆ ಹೇಳುವೆನು' ಎಂದಳು. ರಾಮನು ಅವಳಿಗೆ ಬೇಕಾದಂತೆ ಮಾತು ಕೊಟ್ಟನು. ಅಗಲೆ ರಾಜನು, ನಾಲಗೆತಡೆದು ಎಲ್ಲವನ್ನೂ ಸುಮಂತ್ರನಿಗೆ ತಿಳುಹಿದನು. ಅದನ್ನು ರಾಮನು ಕೇಳಿದನು. ತಂದೆಯ ಆಜ್ಞೆಯನ್ನು ಪಾಲಿಸುವುದೆ ಮಗನಾದವನ ಕರ್ತವ್ಯವು. ನನ್ನಲ್ಲಿ ಸಂದೇಹವೇತಕ್ಕೆ? ನಾನು ತಮ್ಮ ಮಾತನ್ನಾದರೂ ಮೀರುವ ಅಧಮನಲ್ಲ. ಈಗಲೇ ತಮ್ಮ ಇಚ್ಛೆಯನ್ನು

ಸಲ್ಲಿಸುವೆನು. ಮಹಾರಾಜರು ಕೊಟ್ಟ ಮಾತನ್ನು ನಾನು ಅಂಗೀಕರಿಸುವೆನು. ರಾಜ್ಯವನ್ನು ಭರತನೇ ಆಳಲಿ. ನಾನು ವನಗಮನಕ್ಕೆ ಸಿದ್ಧನು. ಇಲ್ಲಿಂದಲೆ ಹೊರಡುವೆನು. ನಮ್ಮ ಕುಲದ ಪಿತೃಗಳು ನನ್ನನ್ನು ಆಶೀರ್ವದಿಸಿ, ಈ ಪ್ರತಿಜ್ಞೆಯನ್ನು ಕೇಳಲಿ:—

'ಭರತನಾಳಲಿ ರಾಜ್ಯವನು, ನೀವ್
ನರಪತಿಯು ಚರಣಾರವಿಂದದ
ಪರಮಸೇವಾನಿರತರಾಗಿರಿ; ನಿಮ್ಮನುಜ್ಞೆಯಲಿ ||
ವರಿಸುವೆನು ವನವಾಸವನು; ಗೋ
ಚರಿಸುವೆನು ನೀವ್ ನುಡಿದ ವರುಷದ
ಪರಿಗಣನೆಯು ಪರಿಯಂತ' ಎಂದನು ಕೈಕೆಗಾರಾಮ.

ಎಂದು ಅವರೆಲ್ಲರಿಗೆ ರಾಮನು ದೃಢವಾಗಿ ನುಡಿದನು.

ಕೈಕಯಿಯ ಸ್ವಾರ್ಥವು ಫಲಿಸಿತು. ರಾಮನು ಆಗಲೆ ಅವಳಿಂದ ವನವಾಸಕಾಲಕ್ಕೆ ಒಪ್ಪುವಂತಹ ಬಟ್ಟೆಗಳನ್ನು ತರಿಸಿಕೊಂಡನು. ರಾಜನನ್ನೂ ಅವಳನ್ನೂ ವಂದಿಸಿ ಹೊರಟನು. ಅಲ್ಲಿಂದ ಅವನು ಹೊರಟಕೂಡಲೆ, ದಶರಥನು ತನ್ನ ಚೇತನವನ್ನೆಲ್ಲ ಉಪಯೋಗಿಸಿ, 'ಹಾ ರಾಮಾ!' ಎಂದು ಒಂದೇ ಬಾರಿ ಉಚ್ಚರಿಸಿ, ಮೈಮರೆತನು. ರಾಮನು ಅದೊಂದನ್ನೂ ಗಣನೆಗೆ ತಾರದೆ, ಕೌಸಲ್ಯಾದೇವಿಯರ ಮಂದಿರಕ್ಕೆ ತೆರಳಿದನು.

ದಶರಥನು ಕೂಗಿದ 'ಹಾ! ರಾಮಾ!' ಶಬ್ದವು ನಗರದಲ್ಲೆಲ್ಲ ಹರಿಯಿತು. ಎಲ್ಲರೂ ಅದನ್ನೆ ಪ್ರತಿಧ್ವನಿಗೈದರು. ಊರಲ್ಲೆಲ್ಲ ಅದೇ ವೃತ್ತಾಂತವು ಎಲ್ಲರಿಗೂ ತಿಳಿಯಿತು, ಕೌಸಲ್ಯಾದೇವಿಗೂ ತಿಳಿಯಿತು. ಅವಳು ರಾಮನಿಗೆ ದೇವಿಯ ಪ್ರಸಾದ ಹಂಚಲು ಕಾದು ನಿಂತಿದ್ದಳು. ರಾಮನು ಆ ಕಾವಿಯ ಬಟ್ಟೆಗಳನ್ನುಟ್ಟು ಬಂದುದನ್ನು ಅವಳು ಕಂಡಾಗಲೆ, ಕಣ್ಣಲ್ಲಿ ಪ್ರಳಯವನ್ನೆ ಕಂಡಳು. ಅವಳ ಪ್ರಾಣವು ಒಡೆವಂತೆ ನಡುಗಿತು. ರಾಮನು ಅವಳ ಕಾಲಿಗೆರಗಿ, ತಾನು ವನಕ್ಕೆ ತೆರಳಲು ಸಿದ್ಧನೆಂದೂ ಅವಳು ಆಶೀರ್ವಾದ ಕೊಡಬೇಕೆಂದೂ ಬೇಡಿಕೊಂಡನು. ಕೌಸಲ್ಯೆಯು ಆಶೀರ್ವದಿಸುವ ಬದಲಾಗಿ ವಿಲಾಪಿಸಲು ತೊಡಗಿದಳು. ಸುತ್ತಲಿದ್ದ ಎಲ್ಲರೂ ಗೋಳಾಡಿದರು. ರಾಮನು ಶಾಂತನೇ ಆಗಿದ್ದನು. 'ಮಾತೆಯೆ,

ವನಗಳಿಗೆ ತೆರಳಿ ರಾಕ್ಷಸರನ್ನು ಕೊಲ್ಲಲು ನನಗೆ ಅಪ್ಪಣೆ ಪಾಲಿಸಬೇಕು. ಮಹಾರಾಜರೂ ತಾವೂ ನನಗೆ ಗುರುಸಮಾನರು. ಅವರ ಮಾತನ್ನು ನೆರವೇರಿಸಲು ತಾವೂ ನನಗೆ ಸಹಾಯಮಾಡುವುದು ಅವಶ್ಯವು. ತಮ್ಮ ಅನುಮತಿ ಇಲ್ಲದೆ ನಾನು ವನಕ್ಕೆ ಹೊರಡಲಾಗದು; ನಾನು ವನಕ್ಕೆ ತೆರಳದೆ ತೀರ್ಥರೂಪರ ಮಾತನ್ನು ಪಾಲಿಸ ಬರುವುದಿಲ್ಲ; ಅವರ ಮಾತು ವ್ಯರ್ಥವಾದರೆ ತಮ್ಮ ಧರ್ಮವೂ ವ್ಯರ್ಥವಾಗುವುದು; ನನಗೂ ನರಕವು ಪ್ರಾಪ್ತವಾಗುವುದು. ನಮ್ಮ ಧರ್ಮವನ್ನು ಕಾಪಾಡುವುದಕ್ಕೂ, ನನ್ನನ್ನು ನರಕದಿಂದ ತಪ್ಪಿಸುವುದಕ್ಕೂ ತಮ್ಮ ಅನುಮತಿಯೂ ಆಶೀರ್ವಾದವೂ ಬೇಕಾಗಿವೆ. ಮಹಾರಾಜರು ಅಲ್ಲಿ ನೆಲಕಚ್ಚಿ ಬಿದ್ದುಕೊಂಡಿರುವರು; ತಾವು ಅತ್ತ ನಡೆದು ಪತಿಶುಶ್ರೂಷೆಯನ್ನು ಮಾಡಿರಿ; ತಮಗೆ ಅದೇ ಸುಖಶಾಂತಿ ಅಲ್ಲವೇ? ಬೇಗನೆ ನನಗೆ ಅನುಮತಿ ಕೊಡಿರಿ' ಎಂದು ಕಾಲಿಗೆ ಬಿದ್ದು ಪ್ರಾರ್ಥಿಸಿಕೊಂಡನು.

ಇಂತಹ ವಿಚಾರಗಳುಳ್ಳ ಮಾತುಗಳನ್ನು ಕೇಳಿ, ರಾಣಿಯು ದುಃಖ ವನ್ನು ಮರೆತಳು. ಅವಳು ರಾಮನನ್ನು ಹೊತ್ತು ಹೆತ್ತು ಸಲಹಿದವಳಲ್ಲವೆ? ಅವಳೂ ಧೈರ್ಯವನ್ನು ತಳೆದಳು. ಅಂತಃಪುರದಲ್ಲೆಲ್ಲ ರೋದನಧ್ವನಿ! ಅಭಿಷೇಕದ ತೀರ್ಥಸ್ನಾನದ ಬದಲಾಗಿ ರಾಮನಿಗೆ ಕಣ್ಣೀರಿನ ಸ್ನಾನ ವಾಯಿತು. ಈ ಕೋಲಾಹಲದ ನಡುವೆ ಲಕ್ಷ್ಮಣನು ಎಲ್ಲ ವೃತ್ತಾಂತ ವನ್ನು ಕೇಳಿ ರಾಮನ ಕಡೆಗೆ ಧಾವಿಸಿ ಬಂದು, ಭರತನ ತಲೆಯನ್ನೆ ಕಡಿಯು ವೆನೆಂದೂ, ಸಮ್ಮತಿಕೊಟ್ಟ ರಾಜನನ್ನೆ ಕೊಂದಿಕ್ಕುವನೆಂದೂ, ಪ್ರೇರೇಪಿಸಿದ ಕೈಕಯಿಾಯನ್ನು ಕಡಿದಾಡುವೆನೆಂದೂ ಕೋಪಗೊಂಡು ಸಾರಿದನು. ಪಿತೃಗಳ ಕಡೆಗೂ ದೇವಗಣದ ಕಡೆಗೂ ಲಕ್ಷ್ಯವಿಟ್ಟು, ವಂಶದ ಗೌರವ ವನ್ನು ಕಾಪಾಡುವುದಕ್ಕಾಗಿ ಶಾಂತನಾಗೆಂದು,—

ಕಾಲವಾವುದು ನೋಡು! ನೆರೆದಿಹ
ಮೇಲಣವರಾರೀಕ್ಷಿಸನ್ನೃತಕೆ
ಸೋಲಲಹುದೇ ? ತಮ್ಮ, ತಂದೆಯಮಾತನತಿಗಳೆದು।
ಮೇಲೆ ಕಾಂಬೈಶ್ವರ್ಯಕಿದು ತಾ
ಕೀಳುಮಾಡದೆ ? ನಮ್ಮನೀ ಜನ
ಜಾಲನಗುವುದು! ಪಿತನನುಜ್ಞೆಯೆ ರಾಜಪದವೆಂದ ||

ರಾಮನು ತಮ್ಮನಿಗೆ ಸಮಾಧಾನ ಹೇಳಿದನು. ಆಗ ತಾನೆ ಅಣ್ಣನ ಮಾತನ್ನು ಮೀರಲಾರದೆ, ತನ್ನ ಸಿಡುಕಿಗೆ ನಾಚಿಕೊಂಡು ಅವನು ಸುಮ್ಮನಾದನು. ಆದರೆ, 'ನಾನು ಇಂತಹ ಊರಲ್ಲಿ ಉಳಿಯಲಾರೆನೆ'ಂದು, ರಾಮನೊಡನೆಯೆ ವನಕ್ಕೆ ಅವನೂ ಹೊರಟನು. ಎರಡು ಬಾಧೆಗಳು ತಾವಾಗಿ ಮಾಯವಾದುವೆಂದು, ಕೈಕಯಿಯು ತನ್ನಲ್ಲೆ ಸುಖಗೊಂಡಳು.

ರಾಮನು ಧರ್ಮಪಾಲನೆಗಾಗಿ, ದೊಡ್ಡ ಬೆಟ್ಟದಂತೆ ದೃಢನಾಗಿ ನಿಂತುದನ್ನು ನೋಡಿ, ಪುರಜನರು ತಮ್ಮ ಗೋಳಾಟವನ್ನು ಕೊನೆಗಾಣಿಸಿದರು. ಸುಮ್ಮನೆ ಅವರು ಮರುಗಲೇತಕ್ಕೆ? ರಾಮನಂತೂ ಸಿಂಹಾಸನವನ್ನು ಏರಲೆಳಸುವುದಿಲ್ಲ. ಅವನ ಇಚ್ಛೆ ಹಾಗಿದ್ದಲ್ಲಿ, ಹೆಂಡತಿಯು ಕುಣಿಸಿದಂತೆ ಕುಣಿದ ಮುದಿ ಅರಸನನ್ನು ಅವರು ಎಂದೋ ದೂರಕ್ಕೆ ತಳ್ಳುತಿದ್ದರು. ದಶರಥ-ಕೈಕಯಿ-ಭರತರಿಗೇ ವನವಾಸವಾಗುತಿದ್ದಿತು. ಇಂತಹ ಸಂಭವವು ರಾಮವಾಕ್ಯದಿಂದಲೇ ದೂರಗೊಂಡಿತು. ರಾಮನು ಕೌಸಲ್ಯೆಯಿಂದ ಅನುಮತಿ ಪಡೆದು ಅಲ್ಲಿಂದ ಹೊರಡುವಾಗ, ರಾಣೀ ಸುಮಿತ್ರೆಯಿಂದ ಲಕ್ಷ್ಮಣನೂ ಅನುಮತಿ ಪಡೆದನು. 'ವತ್ಸಾ! ನಿನಗೆ ರಾಮಚಂದ್ರನೆ ತಂದೆಯಂತಿರುವನು; ಸೀತಾದೇವಿಯೆ ತಾಯಿಯಂತಿರುವಳು; ವನವನ್ನು ಅಯೋಧ್ಯೆಯೆಂದೇ ಬಗೆದು ಅಣ್ಣನೊಡನೆ ಸುಖವಾಗಿ ಸಂಚರಿಸಿ ಬರುವನಾಗು!' ಎಂದು ಅವಳು ಅವನನ್ನು ಆಶೀರ್ವದಿಸಿದಳು.

ರಾಮ-ಲಕ್ಷ್ಮಣರಿಬ್ಬರೂ ವನಗಮನಕ್ಕಾಗಿ ಹೊರಟು ಸೀತಾದೇವಿಯ ಮಂದಿರಕ್ಕೆ ಬರಲು,—ಅವಳು ಪತಿಯೊಡನೆ ಇಲ್ಲದೆ ಇರುವಷ್ಟು ಕಾಲ ಅರಮನೆಯೇ ಸೆರೆಮನೆ ಎಂದು ಭಾವಿಸಿ,—'ಆರ್ಯಪುತ್ರಾ, ಸಹಧರ್ಮಿಣಿಯೆಂದ ಬಳಿಕ ನಾನೂ ನಿಮ್ಮೊಡನೆಯೆ ವನಕ್ಕೆ ಬರುವೆನು,' ಎಂದು ಬೇಡಿಕೊಂಡಳು. 'ರಾಜಕುಮಾರಿಯಾದ ನೀನು ವನಾಂತರಗಳಲ್ಲಿ ಸಂಚರಿಸಲಾರೆ; ರಾಜರ ಸೊಸೆಯಾದ ನೀನು ಕಾಲ್ನಡೆಯಿಂದ ಬಂದು, ಎಲೆಮನೆಗಳಲ್ಲಿ ನಿಂದು, ಗೆಡ್ಡೆಗೆಣಸುಗಳನ್ನು ತಿಂದು, ಹದಿನಾಲ್ಕು ವರ್ಷಗಳಂತಿರಲಿ, ಹದಿನಾಲ್ಕು ಗಳಿಗೆಯನ್ನೂ ಕಾಡಿನಲ್ಲಿ ಕಳೆಯಲಾರೆ. ಬಿಸಿಲಿನ ತಾಪವೆಷ್ಟು, ಮಳೆಯ ಪ್ರತಾಪವೆಷ್ಟು, ಚಳಿಯೆಷ್ಟು, ಗಾಳಿಯೆಷ್ಟು! ದೂಳಿನಲ್ಲಿ ಮಲಗಿ ನಿದ್ರಿಸಬೇಕು. ಕಾಡುಮೃಗಗಳೂ ರಾಕ್ಷಸರೂ ಬಾಧಿಸುವಾಗ

ಬೆದರದೆ ಇರಬೇಕು. ಇದು ಕಠಿನವಲ್ಲವೆ? ಇಲ್ಲೇ ಇದ್ದು ಅತ್ತೆಮಾವಂದಿರ ಸೇವೆ ಮಾಡಿದರೆ ಅದೇ ಪುಣ್ಯಕರವಲ್ಲವೆ?' ಎಂದು ಅವಳಿಗೆ ತಿಳಿಯ ಹೇಳಿದನು.

ಸೀತಾದೇವಿಯು,—' ಪ್ರಾಣವಲ್ಲಭನೆ! ಇಂತಹ ಆಜ್ಞೆಯನ್ನು ನನಗೆ ಕೊಡಬಾರದೆಂದು ಬೇಡಿಕೊಳ್ಳುವೆನು. ತಮಗೆ ಒದಗುವ ಕಷ್ಟಗಳು ಸಾಮಾನ್ಯವಾಗಿವೆಯೆ? ತಾವು ಕಾಡಿನಲ್ಲಿ, ನಾನು ನಾಡಿನಲ್ಲಿ, ಹೀಗಾಗ ಬಹುದೆ? ತಮಗೆ ಮರಗಳ ಬುಡದಲ್ಲಿ ಮಣ್ಣಿನ ಹಾಸು; ನನಗೆ ಮಂಚವೇ? ತಮಗೆ ಕಾಡುಮರಗಳ ಹಣ್ಣು ಹಂಪಲು; ನನಗೆ ಪಂಚ ಭಕ್ಷ್ಯಗಳೂ ಪರಮಾನ್ನವೇ? ಇಂತಹ ಬಾಳಿಕೆಯು ಹಾಳಾಗಲಿ! ನಾನು ಕ್ಷತ್ರಿಯ ಕುಲದಲ್ಲಿ ಹುಟ್ಟಿದವಳು; ಕ್ಷತ್ರಿಯ ಕುಲಕ್ಕೆ ತಂದವಳು; ಕ್ಷತ್ರಿಯ ವೀರನ ಪತ್ನಿ. ನನಗೆ ಇಂತಹ ಬೋಧನೆಯನ್ನು ಮಾಡ ಲಾಗದು. ಸತಿಯೆನಿಸುವವರಿಗೆ ಪತಿಯೇ ಗತಿ. ಪತಿಯ ದುಃಖವೇ ಅವಳ ದುಃಖವು; ಆತನ ಸುಖವೇ ಅವಳ ಸುಖವು. ತಮ್ಮೊಡನಿದ್ದರೆ ನಾನು ವನದಲ್ಲಿಯಾದರೂ ಎಲ್ಲ ದುಃಖವನ್ನೂ ಮರೆವೆನು; ಇಲ್ಲಿದ್ದರೆ ಇವರೆಲ್ಲ ಹಿರಿಯರ ಸೇವೆಯನ್ನು ಮಾಡುವ ಬದಲಾಗಿ ನನ್ನ ದುಃಖವನ್ನೆ ಅವರು ಸಮಾಧಾನಗೊಳಿಸ ಬೇಕಾಗುವುದಲ್ಲವೆ? ಆದುದರಿಂದಲೇ, ಇನ್ನು ನೀವು ಇದಿರಾಡಲಾಗದು. ನಾನು ಇಲ್ಲಿಂದಲೆ ನಿಮ್ಮೊಡನೆಯೆ ಹೊರಟೆನು' ಎಂದು ತಾನೂ ವಲ್ಕಲವನ್ನುಟ್ಟುಕೊಂಡು ಎದ್ದಳು.

ಅವರು ಮೂವರೂ ಇಟ್ಟುಕೊಂಡ ಅಲಂಕಾರಗಳೆಲ್ಲವೂ ದೀನ ದುಃಖಿತರಿಗೆ ಹಂಚಲಾದುವು. ಅಯೋಧ್ಯೆಯನ್ನು ವಂದಿಸಿ, ಅವರು ಮೂವರೂ ಸುಮಂತ್ರನ ರಥವನ್ನೇರಿ ವನಕ್ಕೆ ಹೊರಟರು. ಊರಜನರು ದಶರಥ ಕೈಕಯಿೂ ಭರತರನ್ನು ಎಷ್ಟು ಬಗೆಯಾಗಿ ಹೀನಯಿಸಿದರು! ಆದರೆ ಈ ಮೂವರ ಮುಖಗಳು ಅರಳಿಯೇ ಇದ್ದುದನ್ನು ಕಂಡು ಅವರು ಸಮಾ ಧಾನಚಿತ್ತರಾದರು. ರಾಮನು ಪ್ರಜೆಗಳೊಡನೆ ಮೃದುಮಾತುಗಳಿಂದ ಸಂಭಾಷಣೆ ಮಾಡುತ್ತ ಊರ ಹೆಬ್ಬಾಗಿಲನ್ನು ಮುಟ್ಟಿದನು. ಅಲ್ಲಿಂದ ಆ ಜನರನ್ನು ಹಿಂದಕ್ಕೆ ಕಳುಹಿಕೊಟ್ಟನು. ಹುಲ್ಲುಗಾವಲಿಗೆ ಮೇಯಲು ಹೋಗುವ ತಾಯಿದನವನ್ನು ಎಳಗರು ಕಣ್ಮರೆಯಾಗುವ ತನಕವೂ

ನೋಡಿಯೆ ನಿಲ್ಲುವಂತೆ, ಅವರು ಹೆಬ್ಬಾಗಿಲಲ್ಲೆ ನಿಂತರು. ಸೀತಾರಾಮ ಲಕ್ಷ್ಮಣರು ಬಹುದೂರ ನಡೆದು ಜನರಿಗೆ ಕಾಣಿಸದಾದ ಬಳಿಕ, ಜನರು ನಿಟ್ಟುಸಿರನ್ನು ಸುಯ್ದು, ತಮ್ಮ ತಮ್ಮ ಮನೆಗಳಿಗೆ ಮರಳಿ, ಈ ವೃತ್ತಾಂತ ವನ್ನು ನೆನೆದು ಅಳುತ್ತ, ಒಬ್ಬರಿಗೊಬ್ಬರು ಇವರ ಗುಣಾವಳಿಗಳನ್ನು ಹೇಳಿ ಕೊಂಡಾಡುತಲಿದ್ದರು.

ಈ ಸಮಾಚಾರವು ದಶರಥರಾಯನ ಕಿವಿಗಳಿಗೂ ಮುಟ್ಟಿತು; ಆಗ ಅವನ ದುಃಖಕ್ಕೆ ಮಿತಿಯಿರದು; ಅವನ ದುಃಖವು ಬೆಂಕಿಯಂತೆ ಅವನನ್ನು ಸುಡಲಾರಂಭಿಸಿತು. ಅವನು ರಾಣಿಯರಿಂದ ಎಷ್ಟು ಶುಶ್ರೂಷೆ ಹೊಂದಿ ದರೂ, ಕೈಕಯಿಾಯ ಮಂದಿರವು ಅವನಿಗೆ ಯಮಾಲಯದಂತೆ ತೋರಿತು. ಅತಿ ಪ್ರಿಯಳಾದ ಕೈಕಯಿಾಯನ್ನು ಮಾಯಾವಿನಿಯಾದ ರಾಕ್ಷಸಿಯೆಂದು ಬಗೆದನು. ಅವನು ಅಲ್ಲಿ ಇರಲಾರದೆ, ಕೌಸಲ್ಯಾದೇವಿಯ ಮಂದಿರಕ್ಕೆ ಸೇವಕರೊಡನೆ ತೆರಳಿದನು.

ಅತ್ತ, ಎಷ್ಟೆಂದರೂ ಹೆತ್ತತಾಯಿಯಲ್ಲವೆ? ಕೌಸಲ್ಯೆಯು 'ಹೊಟ್ಟೇ ಮಗನೊಬ್ಬನೇ ರಾಮನು. ಅಂತಹನು ಸಿಂಹಾಸನದ ಬದಲಾಗಿ ವನವನ್ನು ಪಡೆದನು' ಎನ್ನುತ್ತ ಹಣೆಬಡೆದುಕೊಂಡು ಅಳುತಿದ್ದಳು. ರಾಜನು ಅತ್ತ ಬಂದುದೇ ಅವಳ ದುಃಖವು ನೂರ್ಮಡಿಯಾಯಿತು. ಅವಳ ರೋದನದಿಂದ ರಾಜನೂ ಗೋಳಾಡ ತೊಡಗಿದನು; ಕೊನೆಗೆ ಮೂರ್ಛಿತನಾದನು. ಆಗ ಅವಳು ತನ್ನ ದುಃಖವನ್ನು ತಡೆದು, ಅವನನ್ನು ಉಪಚರಿಸಿದಳು. ಬಹಳ ಹೊತ್ತಾದ ಬಳಿಕ, ಅವನು ಮೆಲ್ಲನೆ ಕಣ್ತೆರೆದು,—'ದೇವಿ! ನನಗೆ ಮರಣ ಕಾಲವು ಸಮಿಾಪಿಸಿದಂತೆ ತೋರುವುದು. ಪ್ರಿಯ ಪುತ್ರರಿಂದ ಅಗಲಿದ ವೃದ್ಧ ತಾಯಿತಂದೆಯರು ಅಲ್ಪ ಕಾಲದೊಳಗೇ ಮಡಿದುದನ್ನು ನಾನು ಕಂಡಿರುವೆನು. ಇಂತಹ ವಯಸ್ಸಿನಲ್ಲಿ ಮಕ್ಕಳನ್ನು ಅಗಲಿರಲಾಗುವುದಿಲ್ಲ. ನಾನೆಂತಹ ಪಾಪಿಯು! ಕೈಕಯಿಾಯ ಮನೋಭಿಲಾಷೆಗಾಗಿ ರಾಮನನ್ನು ಕಾಡಿಗೆ ಒಪ್ಪಿಸಿದೆನು. ಇನ್ನು ನನಗೆ ಬೇರೆ ತಪೋವನವೆಲ್ಲಿದೆ? ರಾಮ ನಿಲ್ಲದ ಈ ನಾಡೇ ನನಗೆ ಕಾಡಾಗಿರುವುದು. ಈ ರಾಜಭವನವೆ ನನಗೆ ತಪೋವನವು. ಇರಲಿ; ಕೈಕಯಿಾಯಲ್ಲಾದರೂ ನಾನು ತಪ್ಪೆಣಿಸುವುದಿಲ್ಲ. ನಾನೇ ಅವಳಿಗೆ ಮೊದಲಾಗಿ ಮಾತುಕೊಟ್ಟವನು. ಮುಂದಾಗುವುದರ

ವಿಚಾರವನ್ನು ಮಾಡದೆ ಮೊದಲೇ ಮಾತುಕೊಟ್ಟರೆ, ಅದರಿಂದಲೆ ಘಾತ ವಾಗುವುದು. ಹಿಂದೆ ಯೌವನಕಾಲದಲ್ಲಿ ಮೃಗಬೇಟೆಗೆ ತೆರಳಿದ್ದಾಗ, ಮುದಿಯರಾದ ಹೆತ್ತವರಿಗೆ ನೀರನ್ನು ಕೊಡಬಂದ ಬ್ರಾಹ್ಮಣನಾದ ಶ್ರಾವಣ ನನ್ನು ನಾನು ಕಾಡುಹಂದಿಯೆಂದು ಭಾವಿಸಿ, ಬಾಣದಿಂದ ಕೊಂದಿದ್ದೆನು. ಆ ವೃತ್ತಾಂತವನ್ನು ನಾನೇ ಆ ವೃದ್ಧರಿಗೆ ತಿಳುಹಬೇಕಾಗಿ ಬಂದಿತು. ಹೇಳಿಕೊಂಡೆನು; ಮಗನನ್ನು ಅಗಲಿರಲಾರದೆಯೂ, ನಾನು ಅವರಿಗಾಗಿ ತಂದ ನೀರನ್ನು ಮುಟ್ಟದೆಯೂ, ಅವರು ಗಂಟಲೊಣಗಿ ಮಡಿದರು. ಎಂತಹ ಬ್ರಾಹ್ಮಣದಂಪತಿಗಳನ್ನು ಹತ್ಯೆಮಾಡಿದೆನು! ಇದೀಗ ಅದರಂತೆ ಆಯಿತಲ್ಲವೆ? ಮಗನನ್ನು ನಾನು ಅಗಲಿರುವೆನು. ಆ ವೃದ್ಧ ಬ್ರಾಹ್ಮಣನೂ ನನ್ನಷ್ಟೆ ವಯಸ್ಸಿನವನಾಗಿದ್ದನು. ಅವನಿಗೂ ಉಂಟಾಗಿದ್ದ ಶೋಕದಷ್ಟೆ ನನ್ನಲ್ಲಿಯೂ ದುಃಖವುಂಟಾಗಿದೆ. ಇದೇ ರೀತಿ ಶೋಕಗೊಂಡು ಅವನು ಮಡಿದಿದ್ದನು. ಅವನು, 'ಪುತ್ರಾ ಶ್ರಾವಣಾ!' ಎನ್ನುತ್ತಲೆ ಮೃತನಾಗಿ ದ್ದನು. ನಾನು ಆಗಣಿಂದಲೂ 'ಹಾ, ರಾಮ!'—'ಹಾ! ಸೀತಾರಾಮ!' ಎನ್ನುತ್ತಲಿರುವೆ.....' ಈ ಮಾತು ಮುಗಿವ ಮೊದಲೇ ರಾಜನ ಉಸಿರು ಬಿಗಿಯಿತು. ಕೌಸಲ್ಯೆಯು ಮೊಗವನ್ನು ನೋಡುತಲಿದ್ದಂತೆಯೆ, ರಾಜನು ಪ್ರಾಣತ್ಯಾಗವನ್ನು ಮಾಡಿದನು.

ಮೊದಲೇ ಗೋಳಾಟಮಯವಾಗಿದ್ದ ಆ ರಾಜಭವನದಿಂದ ಈಗ ಶೋಕಸಾಗರವು ಮೊರೆದು, ಕಂಬನಿಯು ತೆರೆಗಳು ಹರಿದು, ಬಿರುಗಾಳಿ ಯಂತೆ ನಿಟ್ಟುಸಿರು ಸುರಿದು, ಪ್ರಲಯ ಪ್ರವಾಹದಂತೆ ಮೇರೆ ಬಿರಿದು, ಅಯೋಧ್ಯಾನಗರವನ್ನೂ ರಾಜ್ಯವನ್ನೂ ದುಃಖಮಗ್ನವನ್ನಾಗಿ ಮಾಡಿತು. ಎಲ್ಲೆಲ್ಲಿಯೂ ಹಾ—ಹಾಕಾರವು! ಭರತನು ಗಿರಿರಾಜಪುರದಿಂದ ಬಂದಿಲ್ಲ. ಪುರೋಹಿತರೂ ಮಂತ್ರಿಗಳೂ ರಾಜನ ಶವವನ್ನು ಎಣ್ಣೆತುಂಬಿದ ದೊಡ್ಡ ಪೆಟ್ಟಿಗೆಯಲ್ಲಿ ಇರಿಸಿದರು. ಕೂಡಲೆ, ಭರತನನ್ನು ಕರೆತರಲು ದೂತರನ್ನು ಅಟ್ಟಿದರು.

ಅಯೋಧ್ಯಾನಗರವು ಶೋಕಸಾಗರವಾಗಿದೆ! ಸಚ್ಚರಿತನಾದ ಭರ ತನು ಬಂದು, ವಿಚಾರಮಾಡಿದನು. ತಾಯಿಯ ದುಷ್ಕೃತ್ಯವನ್ನೂ ತಂದೆಯ ಮರಣವನ್ನೂ ಕೇಳಿ ದುಃಖದಿಂದ ರೋದಿಸಿದನು. ಮಂಥರೆಯನ್ನು

ಬೈದನು; ತಾಯಿಯನ್ನು ಜರೆದನು. ತಂದೆಗಾಗಿ ಸೋದರರಿಗಾಗಿ ಅವನು ಅಳುತ್ತ ಕುಳಿತರೆ, ರಾಜ್ಯಕಾರ್ಯವು ಸಾಗುವುದೆ? ವಸಿಷ್ಠರೂ ಸುಮಂತ್ರನೂ ಅವನಿಗೆ ಬುದ್ಧಿ ಹೇಳಿ ಮೊದಲು ಶವಸಂಸ್ಕಾರವನ್ನೂ ಉತ್ತರಕ್ರಿಯಾದಿ ಗಳನ್ನೂ ಮಾಡಿಸಿದರು. ಬಳಿಕ ರಾಜ್ಯಭಾರವನ್ನು ಅವನು ವಹಿಸಿಕೊಳ್ಳ ಬೇಕೆಂದರು. ಅವನು ಒಲ್ಲನು. ಕೊನೆಗೆ, ಹೇಗೂ ಮಾಡಿ, ಬೇಡಿ ಅಥವಾ ಕಾಡಿ, ರಾಮಚಂದ್ರನನ್ನು ಕಾಡಿನಿಂದ ಮರಳಿ ನಾಡಿಗೆ ತರುವೆನೆಂದು ನಿಶ್ಚಯಮಾಡಿಕೊಂಡನು. ಇದನ್ನು ವಸಿಷ್ಠನು ತಿಳಿದು,—'ಬೇಡ. ಅವನು ಎಂದಿಗೂ ಬಾರನು. ಒಂದೇ ಮಾತಿನ ರಾಮನನ್ನು ನಾನು ಚೆನ್ನಾಗಿ ಬಲ್ಲೆನು. ನೀನೂ ಇಲ್ಲಿಂದ ತೆರಳಿದರೆ ರಾಜ್ಯದಲ್ಲಿ ಅರಸು ಇಲ್ಲದೆ ಶತ್ರುಗಳು ಒಳನುಗ್ಗಲು ಅವಕಾಶವಾಗುವುದು, ಹದಿನಾಲ್ಕು ವರ್ಷಗಳ ತನಕ ನೀನೆ ಆಳಬಹುದು. ದಶರಥರಾಜನೂ ರಾಮಚಂದ್ರನೂ ಇದನ್ನೊಪ್ಪಿರುವರು' ಎಂದು ಅವನನ್ನು ಪ್ರೇರೇಪಿಸಿದನು. ಭರತನು ಮಾತ್ರ ಒಡಂಬಡಲಿಲ್ಲ. 'ತಾಯಿಯ ಅನ್ಯಾಯವು, ನಿರುಪಾಯನಾದ ತಂದೆಯ ದೋಷವು— ಇವುಗಳಿಂದಲೆ ರಾಜ್ಯವು ನನಗಾಗಿದೆಯಲ್ಲವೆ?' ಎಂದು ಭಾವಿಸಿ, ಪರಿ ವಾರದೊಡನೆ ಅಯೋಧ್ಯೆಯಿಂದ ಹೊರಟು, ರಾಮಚಂದ್ರನು ಹೋದ ದಾರಿಯನ್ನು ವಿಚಾರಿಸುತ್ತ, ಅವನನ್ನು ಹುಡುಕುತ್ತ, ಭರತನೂ ಕಾಡಿಗೆ ಹೊರಟನು. ಪ್ರಜೆಗಳು 'ಭರತನೇ ಧನ್ಯನು' ಎಂದು ಅವನನ್ನು ಬಹಳ ವಾಗಿ ಕೊಂಡಾಡಿದರು.

ಇತ್ತ ರಾಮಚಂದ್ರನು ಸೀತಾಲಕ್ಷ್ಮಣರೊಡನೆ ವನಕ್ಕೆ ಹೊರಟವನು ಅಂದಿನ ಸಾಯಂಕಾಲಕ್ಕೆ ತಮಸಾ ನದೀತೀರದಲ್ಲಿದ್ದು ರಾತ್ರಿಯನ್ನು ಕಳೆದನು. ಮರುದಿನ ನಡುಹಗಲಲ್ಲಿ ಭಾಗೀರಥೀ ತೀರವನ್ನು ಸಾರಿ, ಅಲ್ಲಿ ಸ್ನಾನವನ್ನು ಮುಗಿಸಿದನು. ರಾಮಚಂದ್ರನು ಅತ್ತ ಬಂದುದನ್ನು ಕೇಳಿ ಗುಹನು ರಾಮನಿರುವಲ್ಲಿಗೆ ಬಂದನು. ತನ್ನ ಮಿತ್ರನಿಗೆ ಉಂಟಾದ ಸಂಕಟ ವನ್ನು ತಿಳಿದು, ಅವನು ಕೊರಗಿದನು. ಗುಹನು ರಾಮನನ್ನು ತನ್ನ ರಾಜ್ಯ ದೊಳಗೆ ಬರಬೇಕೆಂದು ಬೇಡಿಕೊಂಡರೂ, ಪ್ರತಿಜ್ಞಾಭಂಗವಾಗುವುದೆಂದು ರಾಮನು ಒಪ್ಪಲಿಲ್ಲ. ಆಗ ಇವರನ್ನು ಅವನು ತನ್ನ ನಾವೆಯಲ್ಲಿ ತಾನೇ ಗಂಗಾನದಿಯನ್ನು ದಾಟಿಸಿ, ವಂದಿಸಿ, ತನ್ನೂರಿಗೆ ಮರಳಿದನು. ಮರುದಿನ

ಅವರು ಭರದ್ವಾಜ ಮುನಿಯ ಆಶ್ರಮವನ್ನು ಸೇರಿದರು. ಅವನಿಂದ ನಾನಾ ಸದುಪದೇಶಗಳನ್ನು ಪಡೆದರು. ಅಂದಿಗೆ ಅಲ್ಲೇ ಉಳಿದರು. ಅನಂತರ ಅಲ್ಲಿಂದ ಮುನಿಶ್ರೇಷ್ಠನಾದ ವಾಲ್ಮೀಕಿಯ ಆಶ್ರಮಕ್ಕೆ ತೆರಳಿದರು. ಆ ಆಶ್ರಮದಲ್ಲಿ ಧರ್ಮಕಥಾಖ್ಯಾನಾದಿಗಳನ್ನು ಕೇಳಿ ಕೆಲವು ದಿನಗಳನ್ನು ಕಳೆದರು. ಬಳಿಕ ಅವನ ಸೂಚನೆಯಂತೆ ಅವರು ಚಿತ್ರಕೂಟಪರ್ವತಕ್ಕೆ ನಡೆದು, ಅಲ್ಲಿ ಪರ್ಣಶಾಲೆಯನ್ನು ರಚಿಸಿಕೊಂಡು, ಅದರಲ್ಲಿ ವಾಸ ಮಾಡಿದರು.

ಸೋದರನಲ್ಲಿಯೆ ಹೃದಯವನ್ನು ಮಡಗಿದ ಭರತನು, ಗುಹನನ್ನು ಕಂಡನು. ಭರತನ ಉತ್ತಮ ಸ್ವಭಾವವನ್ನು ತಿಳಿದು ಗುಹನು ಸಂತೋಷ ಪಟ್ಟನು. ರಾಮನು ಹೋದ ದಾರಿಯನ್ನು ಅವನೇ ಭರತನಿಗೆ ತೋರಿಸಿ ಕೊಟ್ಟನು. ಚಂಡಾಲ ಗುಹನ ಅಸಂಖ್ಯನಾವೆಗಳಲ್ಲಿ ಭರತನ ಪರಿವಾರ ವೆಲ್ಲವೂ ಗಂಗಾನದಿಯನ್ನು ಕಷ್ಟವಿಲ್ಲದೆ ದಾಟಿತು. ಭರತನು ತನ್ನ ಸೈನ್ಯಗಳನ್ನು ದೂರದಲ್ಲಿರಿಸಿ, ತಾನೊಬ್ಬನೆ ಭರದ್ವಾಜನ ಆಶ್ರಮವನ್ನು ಹೊಕ್ಕು ಮುನಿಯನ್ನು ಕಾಣಲು,—ಇವನು ಸೈನ್ಯಸಮೇತನಾಗಿ ಬಂದು ದನ್ನು ನೋಡಿ, ರಾಮನನ್ನು ಕಾದಾಡಲು ಬಂದ ಶತ್ರುವೆಂದು ಮುನಿಯು ಸಂಶಯಗೊಂಡನು. ಭರತನು ನಿಜಸ್ಥಿತಿಯನ್ನು ತಿಳುಹಲು, ಮುನಿಯು ಸಂತೋಷಗೊಂಡು, ರಾಮನು ಚಿತ್ರಕೂಟ ಪರ್ವತದ ಮೇಲೆ ಇರು ವನೆಂದು ಅವನಿಗೆ ತಿಳಿಯಹೇಳಿದನು. ಭರತನು ಅತ್ತ ನಡೆದನು. ದೂರ ದಿಂದ ಸೈನ್ಯಗಳು ಹಿಂಬಾಲಿಸಿದುವು.

ಚಿತ್ರಕೂಟದಲ್ಲಿದ್ದ ಜನರು ಸೈನ್ಯಗಳು ಬರುವ ಶಬ್ದವನ್ನು ಕೇಳಿ ದಿಗಿಲುಗೊಂಡರು. ಲಕ್ಷ್ಮಣನು 'ಬಹು ಸೈನ್ಯಗಳು ಇತ್ತ ಬರುವಂತೆ ಭೂತಲವು ನಡುಗಿ ಗುಡುಗುತ್ತಲಿದೆ. ಭರತನು ಇತ್ತ ಬರುವನೇನೋ! ಆದರೆ, ಯಾವನೇ ಆಗಲಿ, ನನಗೆ ಅವನೊಡನೆ ಯುದ್ಧ ಮಾಡಲು ಅಪ್ಪಣೆ ಕೊಡಿರಿ. ನೋಡಿದಿರಾ,—ರಾಜ್ಯದಿಂದ ನಮ್ಮನ್ನು ಕಾಡಿಗೆ ಕಳುಹಿಸಿದುದು ಸಾಲದೆ, ಈ ಕಾಡಿನಲ್ಲೂ ನಮ್ಮನ್ನು ಕಾಡಬರುವನಲ್ಲವೆ?' ಎಂದು ರಾಮನಿಗೆ ಹೇಳಿದನು.

ರಾಮನು ವಿವೇಕಶಾಲಿ, ವಿಚಾರವಂತನು. 'ಇಷ್ಟು ಸೈನ್ಯಗಳು ಬರುವುದಾದಲ್ಲಿ ಭರತನೇ ಬರುವಂತೆ ತೋರುತ್ತಿದೆ. ಆದರೆ, ಅವನು ನಮ್ಮನ್ನು ಗೆಲ್ಲುವುದಕ್ಕಾಗಲಿ ಕೊಲ್ಲುವುದಕ್ಕಾಗಲಿ ಬರುವವನಲ್ಲ. ಅವನನ್ನು ನೀನು ಚೆನ್ನಾಗಿ ಅರಿತುಕೊಂಡಿಲ್ಲ. ನನ್ನ ಪ್ರಾಣವನ್ನೆ ಸೆಳೆಯಲು ಬರುವನೊ? ಛೆ—ಅಲ್ಲ. ನನ್ನನ್ನೂ ನಿನ್ನನ್ನೂ ಸೀತಾದೇವಿಯನ್ನೂ ಮನೆಗೆ ಕರೆದುಕೊಂಡು ಹೋಗಲು ಬಂದಿರುವನು. ಭರತನು ಸಚ್ಚರಿತನು, ವಾತ್ಸಲ್ಯ ಭರಿತನು; ಅದನ್ನೆಣಿಸದೆ ಬೇರೆ ಎಣಿಸದಿರು. ಇಂತಹ ಸೋದರರು ಸಿಗುವುದೇ ಅಪರೂಪವಲ್ಲವೆ?' ಎಂದು ರಾಮನು ಲಕ್ಷ್ಮಣನಿಗೆ ಬುದ್ಧಿ ತಿಳುಹಿದನು.

ಸೈನ್ಯ ಸಾಮಂತರುಗಳನ್ನು ಬಹು ದೂರದಲ್ಲಿರಿಸಿ ಭರತ ಶತ್ರುಘ್ನರಿಬ್ಬರೂ ಸನ್ಯಾಸಿಉಡುಪನ್ನು ಧರಿಸಿಕೊಂಡು, ಚಿತ್ರಕೂಟದ ಆಶ್ರಮದಲ್ಲಿನ ಋಷಿಗಳನ್ನು ವಂದಿಸಿದರು. ತಂದೆಗಾಗಿ, ಸೋದರರಿಗಾಗಿ ಶೋಕದಿಂದಲೂ, ಚಿಂತೆ ಮಾರ್ಗಾಯಾಸಗಳಿಂದಲೂ, ಅವರಿಬ್ಬರ ಮುಖಗಳೂ ಬಾಡಿವೆ. ಅದರ ಮೇಲೆ ಹಾಕಿಕೊಂಡಿರುವ ಈ ಸನ್ಯಾಸೀ ಉಡಿಗೆಯಿಂದಲೂ ಜಟಾಭಾರದಿಂದಲೂ, ಅವರನ್ನು ಕಂಡರೂ ಗುರುತು ಹಿಡಿಯದಂತಾಗಿದೆ. ಇವರನ್ನು ದಶರಥಮಹಾರಾಯನ ಪುತ್ರರೆಂದು ಯಾರೆನ್ನುವರು ?

ಅವರಿಬ್ಬರೂ ಅಲ್ಲಿ ಒಂದು ಹೊಸ ಕುಟೀರವನ್ನು ಕಂಡರು. ಅದು ರಾಮನದೆಂದು ತಿಳಿದು ಅದನ್ನು ನೆಲಮುಟ್ಟಿ ನಮಸ್ಕರಿಸಿದರು; ಲವಲವಿಕೆಯಿಂದ ಅಲ್ಲಿಗೆ ದರ್ಶನಕ್ಕಾಗಿ ಬಂದರು; ಭರತನು ತಾನು ಆಗ ಅಲ್ಲಿ ಕಂಡ ದೃಶ್ಯವನ್ನು ಮರೆವನೆ? ಅವನ ಕಣ್ಣಲ್ಲಿ ನೀರು ಒಸರಿತು; ಅವನು ಮೈಮರೆತನು. ಆಹ! ಎಂತಹ ದೃಶ್ಯವು! ರಾಜಪುತ್ರ ರಾಜಪುತ್ರಿಯರಿಗೆ ವಿಧಿಯು ಎಂತಹ ಅವಸ್ಥೆಯನ್ನು ಉಂಟುಮಾಡಿದನು? ಅದನ್ನು ಸಹಿಸಲಾಗುವುದೆ ? ಅದರಲ್ಲೂ ತಮ್ಮನು ಅಣ್ಣನಿಗಾದ ದುರವಸ್ಥೆಯನ್ನು ನೋಡಿ ತಡೆಯಬಲ್ಲನೆ ? ಭರತನು ರಾಮನ ಚರಣಗಳ ಮೇಲೆ ಬಿದ್ದು ಕಣ್ಣೀರು ಸುರಿಸಿ, ಅವುಗಳನ್ನು ತೊಳೆದನು. ರಾಮನು ಅವನನ್ನು ಪ್ರೀತಿ ಪುರಸ್ಸರವಾಗಿ ಎತ್ತಿಕೊಂಡು, ಆಲಿಂಗಿಸಿದನು. ಬಳಿಕ ಭರತನ ಬಾಯಿಯಿಂದ

ಮಹಾರಾಜನ ಮರಣವಾರ್ತೆಯನ್ನು ಕೇಳಿ, ಗಟ್ಟಿಯಾಗಿ ರೋದಿಸತೊಡಗಿದನು. ಅಲ್ಲಿದ್ದವರೆಲ್ಲರೂ ಅದೇ ರೀತಿ ರೋದಿಸಲು, ವಸಿಷ್ಠನು ಅವರ ದುಃಖ ಸಮಾಧಾನ ಮಾಡಿ, ಫಲ್ಗು ನದೀ ತೀರದಲ್ಲಿ ಅವರಿಂದ ಪಿತೃಶ್ರಾದ್ಧವನ್ನೂ ಪಿತೃತರ್ಪಣವನ್ನೂ ಮಾಡಿಸಿದನು.

ಬಳಿಕ ಭರತನು 'ಅಣ್ಣಾ, ಇನ್ನು ಊರಿಗೆ ತೆರಳೋಣ; ನೀವೇ ರಾಜರು. ಹಿರಿಯ ಅಣ್ಣನಿರುವಾಗ ಕಿರಿಯನು ಹೇಗೆ ಅರಸಾಗುವನು? ಮೂಢೆಯಾದ ನನ್ನ ತಾಯಿಯ ಅಪರಾಧವನ್ನು ಕ್ಷಮಿಸಿರಿ. ನೀವು ರಾಜಾಧಿರಾಜರು; ನಾನು ದಾಸಾನುದಾಸನು. ನೀವು ಊರಿಗೆ ಮರಳಲಾರದೆ ಇನ್ನು ನಿರ್ವಾಹವಿಲ್ಲ. ನಿಮ್ಮ ಜತೆಯಲ್ಲಿ ಅಲ್ಲದೆ, ನಾವು ಯಾರೂ ಇನ್ನು ಮರಳುವುದಿಲ್ಲ. ನಾವು ಒಟ್ಟಾಗಿ ಹೋಗೋಣ'

'ತಂದೆಯುಡುಗಿದ ಬಳಿಕ ನೀನೇ
ತಂದೆ, ತಾಯೆನಗವನಿಜಾತೆಯು,
ಸಂದಿಸುವರೇ ಮನವ ಮಕ್ಕಳು, ಮರೆಯಮಾತೇನು?||
ಇಂದು ನೀನರಸಾಗದಿರೆ, ತ-
ಮ್ಮಂದಿರಲಿ ತಾನೊಬ್ಬ ನಿನಗಿ-
ಲ್ಲೆಂದು ಚಿಂತೈಸುವುದೆ'ನುತ ಬಿನ್ನೈಸಿದನು ಭರತ.

ಎಂದು ಬೇಡಿಕೊಂಡನು.

ರಾಮನು ಆ ಮಾತನ್ನು ಅಂಗೀಕರಿಸಲಿಲ್ಲ. ಭರತನು ಬಾರಿಬಾರಿಗೂ ಕಾಲಿಗೆರಗಿ ಬೇಡಿಕೊಂಡನು. ಎಷ್ಟೊ ಬಗೆಯಾಗಿ ಹೇಳಿಕೊಂಡನು. ರಾಮನು ಎಷ್ಟು ಸಲ ಬರುವುದಿಲ್ಲ ಎನ್ನುವನೋ ಅಷ್ಟು ಸಲ ಭರತನು ಬೇರೆ ಕಾರಣಗಳನ್ನು ಹೇಳುವನು. ಕೊನೆಗೆ ರಾಮನು, "ತಮ್ಮಾ, ತಂದೆಯ ಸತ್ಯವನ್ನು ಕಾಪಾಡುವುದಕ್ಕಾಗಿ ನಾನು ವನಕ್ಕೆ ಬಂದಿರುವೆನು. ಅವರನ್ನು ನರಕದಿಂದ ತಪ್ಪಿಸುವುದೆ ನನ್ನ ಧರ್ಮವು. ಅದೂ ಅಲ್ಲದೆ, ನಾವಿಬ್ಬರು ಒಂದೆಯಲ್ಲವೆ? ಅರಸು ನೀನಾದರೇನು, ನಾನಾದರೇನು? ವೃಥಾ ಪೀಡಿಸದಿರು. ರಾಜ್ಯಕ್ಕೆ ತೆರಳಿ ಪ್ರಜೆಗಳನ್ನು ಆಳುವನಾಗು. ನಾನು ಹದಿನಾಲ್ಕು ವರ್ಷಗಳಲ್ಲಿ ಸರಿಯಾಗಿ ಅಯೋಧ್ಯೆಗೆ ಮರಳುವೆನು" ಎಂದು ಅವನಿಗೆ ಸಮಾಧಾನ ಹೇಳಿದನು.

ರಾಮನ ಆಜ್ಞೆಯನ್ನು ಇನ್ನು ಮೀರಲಾಗುವುದಿಲ್ಲವೆಂದು ಭರತನು ತಿಳಿದನು. ಅವಶ್ಯವಾಗಿಯೂ ತಾನು ಊರಿಗೆ ಹಿಂತೆರಳಬೇಕೆಂದೂ ರಾಮನು ಬಾರನೆಂದೂ ತಿಳಿದ ಬಳಿಕ, ರಾಮನ ಪಾದುಕೆಗಳನ್ನು ಎತ್ತಿ ಕೊಂಡು ಅವುಗಳನ್ನು ತನ್ನ ತಲೆಯ ಮೇಲೆ ಧರಿಸಿಕೊಂಡು, ಅಯೋಧ್ಯೆಗೆ ಮರಳಿದನು. ತಾನು ರಾಜನಲ್ಲ, ರಾಮನ ಪ್ರತಿನಿಧಿ ಎಂದನು. ಅವನು ಅಯೋಧ್ಯೆಯಲ್ಲಿ ಇರದೆ, ಸಮೀಪದಲ್ಲಿದ್ದ ನಂದಿಗ್ರಾಮಕ್ಕೆ ತೆರಳಿದನು. ಅಲ್ಲಿಂದಲೆ ಅವನು ರಾಜ್ಯಭಾರವನ್ನು ನಿರ್ವಹಿಸಿದನು. ಸಿಂಹಾಸನದ ಮೇಲೆ ರಾಮನ ಪಾದುಕೆಗಳು ಇದ್ದುವು. ಭರತನು ರಾಮನಂತೆಯೆ ಜಟಾವಲ್ಕಲಗಳನ್ನು ಧರಿಸಿಯೂ ಫಲಮೂಲಗಳನ್ನೆ ತಿನ್ನುತ್ತಲೂ ತನ್ನ ತಾಯಿಯು ಮಾಡಿದ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ತಾನು ಮಾಡು ತಿದ್ದನು.

ಇತ್ತ ರಾಮನು,— ಈ ಬಾರಿಗೆ ಭರತನನ್ನು ಕಳುಹಿದುದಾಯಿತು. ಆದರೂ ಆಲ್ಲೇ ಉಳಿದರೆ, ಭರತನು ಬಾರಿಬಾರಿಗೂ ಅತ್ತ ಬಂದು ತನ್ನ ಮನಸ್ಸನ್ನು ವಿಚಲನಗೊಳಿಸಬಹುದು; ಅದೂ ಆಲ್ಲದೆ ವನಗಳಲ್ಲಿ ಸಂಚರಿಸ ಬೇಕೆಂಬ ತಂದೆಯ ಮಾತೂ ವ್ಯರ್ಥವಾಗುವುದು,— ಎಂದು ಭಾವಿಸಿ, ಇನ್ನು ಅಲ್ಲಿರದೆ, ಚಿತ್ರಕೂಟ ಪರ್ವತದಿಂದ ದಂಡಕಾರಣ್ಯದ ಕಡೆಗೆ ಹೊರಟನು. ಅವರು ದಾರಿಯಲ್ಲಿ ಅತ್ರಿಮುನಿಯ ಆಶ್ರಮವನ್ನು ಸೇರಿದರು. ಅಲ್ಲಿ ನಾನಾ ಮಾತುಕತೆಗಳು ನಡೆದುವು. ಅತ್ರಿಪತ್ನಿಯಾದ ಅನಸೂಯೆಯು ಸೀತಾದೇವಿಯನ್ನು ಕುರಿತು,—' ವತ್ಸೆಯೇ ! ನೀನು ಪತಿಪರಾಯಣೆ ಯಾಗಿರುವುದನ್ನು ಕಂಡು ನಾನು ಸಂತೋಷಗೊಂಡಿರುವೆನು. ನಿನ್ನ ಈ ಬುದ್ಧಿಯು ಚಂಚಲವಾಗದಂತೆಯೂ, ನಿನ್ನ ನಡತೆಯೆ ಎಲ್ಲ ಸ್ತ್ರೀಜಾತಿಗೆ ಮೇಲ್ಪಂಕ್ತಿಯಾಗಿರುವಂತೆಯೂ, ಅದರಿಂದ ಈ ಜಗತ್ತು ಪವಿತ್ರವಾಗು ವಂತೆಯೂ, ನಾನು ಭಗವಂತನಲ್ಲಿ ಪ್ರಾರ್ಥಿಸಿಕೊಳ್ಳುತಿರುವೆನು. ನಾರೀ ಧರ್ಮವನ್ನು ನೀನು ಚೆನ್ನಾಗಿ ತಿಳಿದುಕೊಂಡಿರುವೆ. ಪತಿಯೆ ಸ್ತ್ರೀಯರಿಗೆ ಪರಮದೇವತೆ, ಗುರು, ಬಂಧು. ಪತಿಶುಶ್ರೂಷೆಯಿಂದಲೆ ಸಾವಿತ್ರಿಯು ಸ್ವರ್ಗವನ್ನು ಪಡೆದಳು. ಪತಿಸೇವೆಯ ಮಹಿಮೆಯಿಂದಲೆ ಚಂದ್ರನು ರೋಹಿಣಿಯೊಡನೆ ಯಾವಾಗಲೂ ಇರಬೇಕಾಗಿದೆ. ಅವರಂತೆ ನೀನೂ

ಪತಿವ್ರತೆಯಾಗಿ ಬಾಳು!, ಎಂದು ಆಶೀರ್ವದಿಸಿದಳು. ಅತ್ರಿಯು,— ರಾಮಾ, ಈ ವನವು ರಾಕ್ಷಸಮಯವಾಗಿದೆ; ಸ್ವಲ್ಪ ದೂರದಲ್ಲಿ ದಂಡಕಾರಣ್ಯವಿರುವುದು. ಅಲ್ಲಿರುವುದೇ ನಿಮಗೆ ಹಿತವು. ಅಲ್ಲಿ ಸಂಕಟಗಳೂ ಕಡಿಮೆ; ನಿನ್ನ ಸಂಗಡ ಸೀತಾದೇವಿಯು ಇರುವುದರಿಂದ ನೀನು ಇಲ್ಲಿರದೆ ಅತ್ತ ತೆರಳುವುದು ವಿಹಿತವು' ಎಂದಾಡಿದನು. ಬಳಿಕ, ಇವರು ಮೂವರೂ, ಮುನಿಗಳನ್ನೂ ಮುನಿಪತ್ನಿಯರನ್ನೂ ವಂದಿಸಿ, ದಂಡಕಾರಣ್ಯದ ಕಡೆಗೆ ನಡೆದರು.

ಅತ್ತ ನಂದಿಗ್ರಾಮದಲ್ಲಿ ರಾಮನ ಪ್ರತಿನಿಧಿಯಾಗಿ, ಭರತನು ಪಾದುಕೆಗಳನ್ನು ನಿತ್ಯವೂ ನಮಿಸುತ್ತ, ಸದಾಕಾಲವೂ 'ಸೀತಾ—ರಾಮ' ಎಂದು ಧ್ಯಾನಮಾಡುತ್ತ, ರಾಜ್ಯಪಾಲನೆಯನ್ನು ಮಾಡುತಿದ್ದನು.



# ೩. ಅರಣ್ಯಕಾಂಡ

ದಂಡಕಾರಣ್ಯವನ್ನು ಮೂವರೂ ಪವೇಶಿಸಿದರು. ಆಗಲೆ ಭಯಂಕರವಾದ ಸಂಕಟವು. ದಾರಿಯಲ್ಲಿಯೆ ವಿರಾಧನೆಂಬುವ ರಾಕ್ಷಸನು. ಅವನ ತಂದೆ ಎಷ್ಟು ಕ್ರೂರನಾಗಿದ್ದನೆಂದರೆ ಅವನನ್ನು ಎಲ್ಲರೂ ಕಾಲ (ಯಮ)ನೆಂದು ಕರೆಯುತಿದ್ದರು. ಅವನ ದೇಹವು ಎಷ್ಟು ದೊಡ್ಡದು! ಬೆನ್ನ ಮೇಲೆ ಮಾಂಸದ ಮುದ್ದೆಗಳನ್ನು ಅವನು ಹೊರುತಿದ್ದನು. ಅದರ ವಾಸನೆ ಕಾಡಿನಲ್ಲೆಲ್ಲ ನಾತಬಡಿಯಿತು. ರಾಮನು ಅವನನ್ನು ಕೊಂದು, ಅವನನ್ನೂ ಅವನು ಕಟ್ಟಿತಂದ ದುರ್ಗಂಧವನ್ನೂ ಮಣ್ಣಿನಲ್ಲಿ ಹೂತು ಬಿಟ್ಟನು. ವಿಪತ್ತು ನಿವಾರಣೆಹೊಂದಿತು.

ಅಲ್ಲಿಂದ ಮುಂದೆ ಅವರು ಶತರಂಗ, ಸುತೀಕ್ಷ್ಣ, ಅಗಸ್ತ್ಯ ಮೊದಲಾದ ಋಷಿಗಳ ಆಶ್ರಮಗಳನ್ನು ಕ್ರಮವಾಗಿ ದಾಟಿ, ಅವುಗಳಲ್ಲಿ ಕೆಲಕೆಲವು ದಿನ ಸುಖವಾಗಿ ಇದ್ದು ಅವರಿಂದ ನಾನಾ ಧರ್ಮೋಪದೇಶಗಳನ್ನು ಪಡೆದರು. ಕೊನೆಗೆ ಅಗಸ್ತ್ಯನ ಸೂಚನೆಯಂತೆ ಅವರು ಹತ್ತಿರದಲ್ಲಿದ್ದ ಪಂಚವಟಿಯೆಂಬ ಸ್ಥಾನದಲ್ಲಿ ಎಲೆಮನೆಯನ್ನು ಕಟ್ಟಿಕೊಂಡರು. ಅಲ್ಲೆ

ಅವರು ಉಳಿದರು. ಸಮೀಪದಲ್ಲಿ ಗೋದಾವರೀ ನದಿ. ಇಂತಹ ಸುಂದರ ತಪೋವನಗಳು ಕಡಿಮೆ; ಅಮರಾವತಿಯಂತೆ ಸುಂದರ, ಮನೋಹರ. ಜಗತ್ತಿನಲ್ಲಿ ಊರುಗಳೇ ಸುಂದರವಾಗಿಲ್ಲ; ಊರುಗಳನ್ನು ಮನುಷ್ಯನು ಮಾಡಿಕೊಂಡುದಲ್ಲವೆ? ಭಗವಂತನು ಸೃಷ್ಟಿಸಿದ ವನಗಳು ಯಾರ ಕೈಚಳಕವೂ ಇಲ್ಲದೆ ಅತಿ ಸುಂದರ, ಅತಿ ಮನೋಹರ. ಅಲ್ಲಿ, ನಾಲ್ಕು ಕಡೆಗಳಲ್ಲಿಯೂ ನಾನಾ ಗಿಡಮರಗಳು, ಹೂಗೊಂಚಲುಗಳು; ಎಲೆಗಳ ಹಬ್ಬ, ಹಿಂಡು ಹಿಂಡು ಹಕ್ಕಿಗಳು; ಪ್ರತಿ ದಿನ ಸ್ನಾನಕ್ಕೆ ನಿರ್ಮಲವಾದ ಗೋದಾವರಿಯ ತೀರ್ಥ; ಆಡ್ಡಾಡುವುದಕ್ಕೆ ಹುಲ್ಲುಹಾಸಿದ ತೀರಗಳು; ನಿರ್ಮಲವಾದ ತಂಪಾದ ಗಾಳಿ ಎಡೆಬಿಡದೆ ಹರಿಯುತ್ತಿರುವುದು. ಹಣ್ಣು ಹಂಪಲನ್ನೂ ಗೆಡ್ಡೆಗೆಣಸುಗಳನ್ನೂ ಲಕ್ಷ್ಮಣನು ಕೂಡಿಸಿ ತರುವನು; ಎಲ್ಲರೂ ಅವನ್ನು ಸುಖವಾಗಿ ರುಚಿಯಿಂದ ತಿನ್ನುವರು. ಅವರಿಗೆ ಆಯಾಸವೂ ಇಲ್ಲ; ದುಃಖವೂ ಇಲ್ಲ. ಆಗಾಗ ಮುನಿಗಳೂ, ಮುನಿಪತ್ನಿಯರೂ ಸಂಭಾಷಣೆಗೆ ದೊರೆಯುತಿದ್ದರು; ಅಯೋಧ್ಯಾವಾಸವನ್ನು ಕುರಿತಾಗಿಯೂ ಅವರು ತಂತಮ್ಮೊಳಗೆ ಆಡುತ್ತಲೂ ಇದ್ದರು.

ಈ ಪಂಚವಟೀ ವನವನ್ನು ಅವರಿಗೆ ತೋರಿಸಿಕೊಟ್ಟುದು ಯಾರು? ಜಟಾಯು. ಇವನು ದಶರಥನಿಗೆ ಮಿತ್ರನಾಗಿದ್ದನಂತೆ. ನೋಡಿದರೆ ದೊಡ್ಡದೊಂದು ಹಕ್ಕಿಯಂತೆ ಕಾಣುವನು; ಗರುಡಪುತ್ರನು. ಅವನು ಇವರನ್ನೆಷ್ಟು ದಿನ ಎಷ್ಟು ಭಕ್ತಿಯಿಂದ ಸತ್ಕರಿಸಿದನು!

ಪಂಚವಟಿಯ ಆಶ್ರಮವೇ ಇವರಿಗೆ ವಿಲಾಸಸ್ಥಾನವಾಯಿತು. ಕೆಲವು ವರ್ಷಗಳು ಕಳೆದುವು. ಸೀತಾ—ರಾಮರು ಒಂದು ದಿನ ಕುಟೀರದಲ್ಲಿದ್ದರು. ಹೊರಗೆ ಲಕ್ಷ್ಮಣನು ಬಾಗಿಲಲ್ಲೆ ನಿಂತಿದ್ದನು. ಒಬ್ಬ ರಾಕ್ಷಸಿಯು ಅಲ್ಲಿಗೆ ಬಂದಳು. ತನ್ನ ರೂಪವನ್ನು ಮರೆಯಿಸಿ, ಸುಂದರಿಯಾಗಿ ಇದಿರಾದಳು. ಅವಳಾಗಿ, "ನಾನು ಲಂಕೆಗೆ ಒಡೆಯನಾಗಿರುವ ರಾವಣನ ಮತ್ತು ಅವನ ತಮ್ಮ ವಿಭೀಷಣನ ಸೋದರಿಯು, ನನ್ನ ಹೆಸರು ಶೂರ್ಪನಖಾ!" ಎಂದು ತನ್ನ ಪರಿಚಯವನ್ನು ಇವರಿಗೆ ಹೇಳಿಕೊಂಡಳು. ಕಾಲು ಹೋದ ದಾರಿ ಹಿಡಿದು ಸಿಕ್ಕಲ್ಲಿ ಸಂಚರಿಸಿ, ಅವಳು ಅತ್ತ ಬಂದಿದ್ದಳು. ವೇಷ ಹಾಕಿಕೊಂಡರೂ, ರಾಕ್ಷಸಿಯಲ್ಲವೆ? ರೀತಿಯನ್ನೇನು ಬಲ್ಲಳು?

ರಾಮನೊಡನೆ ಸಲ್ಲಾಪವಾಡ ತೊಡಗಿದಳು. ರಾಮನು ಬಲು ಸುಂದರನು. ಅವನ ರೂಪವನ್ನು ಮೋಹಿಸಿದಳು. ಅವಳ ಮಾತುಗಳನ್ನು ಸಾಧಾರಣ ಜನರೂ ಕೇಳಿದರೆ ನಾಚಿಕೊಳ್ಳಬೇಕು. ಅವಳು ಮಾತ್ರ ರಾಮನನ್ನು ಮದುವೆಯಾಗಬೇಕೆಂದು ಬೇಡುತ್ತಿರುವಳು. ಇವಳಿಗೆ ನಾಚುಗೆಯಿಲ್ಲ ವೆಂದರೆ, ರಾಮನಿಗೆ ಇವಳ ಮಾತು ಒಪ್ಪುವುದೆ? ನೀತಿ ತಪ್ಪಿದವಳ ರೀತಿ ಒಪ್ಪುವುದುಂಟೆ? 'ನನಗೆ ಮದುವೆಯಾಗಿದೆ; ಅಲ್ಲಿ ಲಕ್ಷ್ಮಣನಿರು ವನಲ್ಲ; ಅವನು ನನಗೆ ಸೋದರನು, ಅವನನ್ನು ವಿಚಾರಿಸು' ಎಂದು ರಾಮನು ಅವಳನ್ನು ತಿರಸ್ಕರಿಸಿ, ಸೀತಾದೇವಿಯ ಮುಖವನ್ನು ನಗುತ್ತ ನೋಡಿದನು.

ಸರಿ, ರಾಕ್ಷಸಿ ಲಕ್ಷ್ಮಣನ ಕಡೆಗೆ ಕಾಲಿಟ್ಟಳು. ಅವನು ನಾನಾ ವಿಧವಾಗಿ ಅವಳನ್ನು ಬೋಧಿಸಿದನು; ಬೇಡಿಕೊಂಡನು. ಅವಳು ನಾನಾ ವಿಧವಾಗಿ ವಿನೋದ ಮಾತುಗಳನ್ನೆ ಆಡಿದಳು. ಆಗಲೂ ರಾಮನು ಸೀತೆಯ ಕಡೆಗೆ ನೋಡುತ್ತ ನಗುತಲಿರುವನು. ಸೀತೆಯೂ ಇವಳ ನಿರ್ಲಜ್ಜ ತನಕ್ಕೆ ನಗುವಳು. ಶೂರ್ಪನಖಿಯು ಇಷ್ಟನ್ನು ಸಹಿಸುವಳೆ? ಅವಳಿಗೆ ಇವರಲ್ಲೊಬ್ಬರೂ ಮದುವೆಯಾಗಲಿಲ್ಲವೆಂದು ನಿರಾಶೆಯಾಗಿ, ಇದ್ದೊಬ್ಬ ಸ್ತ್ರೀಯನ್ನೆ ನುಂಗಿದರೆ, ರಾಮನೆ ತನ್ನನ್ನು ಮದುವೆಯಾಗಲು ಅಡ್ಡಿಯಿರ ದೆಂದೂ, ಅವಳು ನಗುತಿದ್ದುದಕ್ಕೂ ದಂಡನೆಯಾಗುವುದೆಂದೂ ಭಾವಿಸಿ, ಅವಳು ವೇಷವನ್ನು ತೊರೆದು, ಸೀತಾದೇವಿಯನ್ನು ಸೀಳಿ ತಿನ್ನಲು ಮುಂದಾ ದಳು. ರಾಮನು ಅಲ್ಲಾಡದೆ, ಸೀತೆಗೆ ಬೆದರಬೇಡೆಂದು, ಲಕ್ಷ್ಮಣನಿಗೆ ಕಣ್ಣುಸಂಜ್ಞೆಮಾಡಿದನು. ಅವನು ರಾಕ್ಷಸಿಯ ಕೂದಲು ಹಿಡಿದು, ಅವಳ ಕಿವಿ ಮೂಗುಗಳನ್ನು ಕೊಯ್ದುಕ್ಕಿದನು. ಇನ್ನು ಸುಂದರಿಯೆಂದು ರಾಕ್ಷ ಸಿಯು ಯಾರನ್ನೂ ಬಾಧಿಸಳು. ಅಹಹಾ! ಅವಳ ಕೂಗೇ, ಗರ್ಜನೆಯೇ! ಅದರಲ್ಲೂ ಮೂಗಿನಿಂದ ಮಾತುಗಳು ಹೊರಟು, ಅವಳ ಅರ್ಭಟೆಯು ಇನ್ನಷ್ಟು ವಿಕಾರವಾಗಿ ಕೇಳಿಸಿತು. ಈಗ ಸೀತಾದೇವಿಯು ಚೆನ್ನಾಗಿ ನಕ್ಕಳು. ಅವಳು ಇದಕ್ಕಾಗಿ ಕೆರಳಿ, ಖರ ದೂಷಣರೆಂಬುವ ಅಲ್ಲಿನ ರಾಕ್ಷಸಮುಖ್ಯರನ್ನು ರಾಮನಿರುವಲ್ಲಿಗೆ ಕರೆದಳು. ರಾಮನು ಅವರನ್ನು ಸಂಹರಿಸಿದನು. ಎತ್ತಲೋ ಮೂಲೆಯಲ್ಲಿ ಅಡಗಿದ್ದ ರಾಕ್ಷಸರು ತಾವಾಗಿ

ಇದಿರುಬಿದ್ದು ಸಾಯುವಂತಾಯಿತು. ಇನ್ನು ಪಂಚವಟಿಯಲ್ಲಿ ರಾಕ್ಷಸರು ಉಳಿಯಲಿಲ್ಲ. ಇವರಿಗೆ ಇನ್ನು ಸುಖವು ಹೆಚ್ಚಿತು.

ರಾಕ್ಷಸ ಸೇನಾಪತಿಗಳಿಬ್ಬರೂ ತನಗಾಗಿ ಮಡಿದ ದುಃಖವು; ರಾಮ ಲಕ್ಷ್ಮಣರಲ್ಲೊಬ್ಬರೂ ತನ್ನ ಕೈಹಿಡಿಯದ ದುಃಖವು; ತನಗಿಂತ ಮೇಲಾದ ಸುಂದರಿಯು ಅಲ್ಲಿದ್ದ ದುಃಖವು; ತನಗಿದ್ದ ಸೌಂದರ್ಯವು ಇಲ್ಲದಂತಾದ ದುಃಖವು;—ಹೀಗೆ ಬಗೆಬಗೆಯ ದುಃಖಗಳನ್ನು ಅನುಭವಿಸಬೇಕಾದರೂ, ಸರಿಯಾಗಿ ಅಳುವುದಕ್ಕೂ ಉಪಾಯ ತೋರದ ದುಃಖವೇ ಶೂರ್ಪನಖಿ ಯನ್ನು ಧಾರಾಳವಾಗಿ ಬಾಧಿಸಿತು. ಇನ್ನಾರುಗತಿ? ರಾವಣಣ್ಣನಿಗೆ ಮೊರೆಯಿಡುವಳೆ? ಅವನು ಇವಳ ಮೂಗು ಕೊಯಿಸಿಕೊಂಡುದಕ್ಕೆ ನಗಬಹುದು. ಆದರೆ, ಕಾಡಾಡಿಗಳಾದ ಹುಲುಮನುಷ್ಯರನ್ನು ವಿವಾಹವಾಗ ಹೋಗಿ ಹೀಗಾಯಿತೆಂದರೆ, ಅವನು ಧಿಕ್ಕರಿಸಿ ಕಣ್ಣುಗಳನ್ನು ಕೀಳನೆ? ಅಂತಹ ವೈಭವಶಾಲಿಯಾದವನ ಸೋದರಿಯು ಇಂತಹ ಪರಮ ನೀಚಳೆಂದಾದರೆ, ಅವನು ಊರಲ್ಲಿರಗೊಡದೆ ನಿಂತಲ್ಲೆ ಸುಡಿಸುವನು! ಇನ್ನು ಠಕ್ಕಿಗೆ ಶರಣೆಂದಳು.

ತನ್ನ ವೇಷವನ್ನು ಇನ್ನಷ್ಟು ವಿಕಾರಪಡಿಸಿಕೊಂಡಳು. ಮಡಿದ ಸೇನಾಪತಿಗಳ ನೆತ್ತರನೆಲ್ಲ ಮೈಗೆ ಬಳಿದುಕೊಂಡಳು. ಲಂಕೆಗೆ ಬಂದಳು. ಅಣ್ಣನಿದ್ದಲ್ಲಿಗೆ ಹೋದಳು. ದೂರದಿಂದಲೆ 'ಹ್ಣ್ಯಾ ಹಣ್ಣ' ಎಂಬಂತೆ ಸಿಂಹಾಸನದಲ್ಲಿದ್ದ ಅಣ್ಣನಿಗೆ ಕೂಗಿಕೊಂಡಳು. ದೇವತೆಗಳ ವಜ್ರಾಯುಧದ ಧ್ವನಿಗಿಂತ ಈ ನಾದಕ್ಕೆ ಅವನು ಬೆದರಿದನು. ಎದ್ದು ಕೆಳಗಿಳಿದು ಬಂದನು, ನೋಡಿದನು.

ಎನುವುದೇನ್? ಆ ಸಮಯದಲಿ ನೆರೆ
ಹಣಿದ ಮೂಗಿನ ಹರಿದ ತುಟಿಗಳ
ಜಣುಗುಕಿವಿಗಳ ಜರಿದ ಹುಣ್ಣಿನ ಕೊರೆದಕವಪುಗಳ।
ವ್ರಣದ ದುರ್ಗಂಧದ ಮಹಾ ಭೀ-
ಷಣದ ರಕ್ಕಸಿ ಬಂದಳಾ ರಾ-
ವಣನ ರಚಿತ ಸಭಾಂತರಾಳಕೆ ಮೃತ್ಯುರೂಪಿನಲಿ.

ಎನಿದು ಅಪಸ್ಮಾರ! ತನ್ನ ಒಡಹುಟ್ಟಿದವಳಾದರೂ ಇವಳ ಗುರುತೇ

ಹತ್ತಿದು. ಅವಳು ಒದರಿ ಒದರಿ, ಮೂಗಿನ ನೆತ್ತರು ಸಿಂಬಳಗಳ ಎಡೆ ಯಿಂದ ಕರ್ಕಶವಾಗಿ ಸುಳ್ಳುಸುಳ್ಳಾಗಿ ಬೇಕೆಂದು ಅಳುತ್ತ ಹೀಗೆ ಹೇಳಿದಳು—'ಅಣ್ಣಾ, ನಿನ್ನಂತಹ ರಾಜನ ಸಂಭ್ರಮಕ್ಕೆ ಒಡತಿಯಾಗತಕ್ಕ ಪರಮ ಸುಂದರಿಯೊಬ್ಬಳು ನನ್ನ ವಿಹಾರವನವಾದ ಪಂಚವಟಿಯಲ್ಲಿರುವಳು. ನಿನಗಾಗಿ ನಾನು ಅವಳನ್ನು ತರಬೇಕೆಂದಿದ್ದೆನು. ನಿನ್ನಲ್ಲಿ ಇಲ್ಲದ ರತ್ನವಾ ವುದೂ ಮೂರು ಲೋಕಗಳಲ್ಲಿಲ್ಲ; ಉಳಿದೊಂದು ಸ್ತ್ರೀರತ್ನವೇ ಅದು. ಅದನ್ನು ತರಬೇಕೆಂದಾಗ, ನನಗಾದ ಅವಸ್ಥೆಯನ್ನು ನೋಡು. ಕಾಡಾಡಿ ಗಳು, ರಾಮನಂತೆ, ಲಕ್ಷ್ಮಣನಂತೆ (ಈ ಹೆಸರಿನ ಅವಳ ಉಚ್ಚಾರವು ರಾವಣ ನಿಗೆ ಕೊನೆಯ ತನಕವೂ ತಿಳಿಯಲಿಲ್ಲ) ಅವರೇ ನನ್ನನ್ನು ಕೆಡಿಸಿದರು. ನಾನೂ ಸತ್ತರೂ ಚಿಂತೆಯಿಲ್ಲವೆಂದು ಖರದೂಷಣರಿಗೆ ತಿಳುಹಿದೆನು. ಅವರಿಂದಾದರೂ ಆ ಹೆಂಗಸನ್ನು (ಸೀತೆಯನ್ನು) ಇಲ್ಲಿಗೆ ತರಬೇಕೆಂದಿದ್ದೆನು; ಆ ದುಷ್ಟರು ಇವರನ್ನೂ ಕೊಂದರು. ನಿನಗಾಗಿ ನಾನು ಹೀಗಾದೆನು; ಇನ್ನು ನನಗಾಗಿ ನೀನು ಹೇಗಾದರೂ ಮಾಡಿ ಆ ಸೀತೆಯನ್ನು ಇತ್ತ ತಾ; ಆ ಕಾಡಾಡಿಗಳನ್ನು ದಂಡಿಸು. ಅವಳನ್ನೊಮ್ಮೆ ನಿನ್ನ ಮಗ್ಗುಲಲ್ಲಿಯೂ, ಅವರನ್ನು ಖರ ದೂಷಣರ ಮಗ್ಗುಲಲ್ಲಿಯೂ ಇರುವುದನ್ನು ನೋಡಿದರೆ, ನನ್ನ ಮೂಗೂ ಕಿವಿಗಳೂ ಮರಳಿ ಚಿಗುರಿದಂತಾಗುವುದು."

ಸೋದರಿಗಾದ ಅಪಮಾನ, ಸೇನಾಪತಿಗಳ ಮರಣದ ದುಮ್ಮಾನ, ತನಗಾಗಿ ಇವಳು ಹಾಳಾದಳೆಂಬ ಅಭಿಮಾನ, ಇವು ಮೂರೂ ಅವನನ್ನು ಕೆಣಕಿಸಿದುವು. ಮೇಲಾಗಿ ಸುಂದರಿ ತನ್ನವಳಾಗಬೇಕೆಂದು ದುರಾಶೆಯಿಂದ ಅವನು ನಿಂತಲ್ಲೆ ಮನಸೋತನು. ತನ್ನಂತಹ ವೈಭವದ ಶ್ರೀಮಂತನಿಗೆ ಬೇಕೇ ಹೊರತಾಗಿ, ಕಾಡಾಡಿಗಳಿಗೆ ಸುಂದರಿ ಯಾಕೆ? ರಾಮನೆಂಬುವನು ಸುತ್ರಾಮನಿಗೂ ಮೇಲಾದವನೋ?—ಇನ್ನೀಕ್ಷಣವೇ ಪಂಚವಟಿಗೆ ಹೋಗಿ, ಅವರನ್ನು ಕೊಂದು, ಸೀತೆಯನ್ನು ತರುವೆನೆಂದು ಅಲ್ಲಿಂದಲೆ ಹೊರಟನು. ಪರಸ್ತ್ರೀಯನ್ನು ಬಯಸಿ, ಅವನು ಆ ಕ್ಷಣದಲ್ಲಿ ಇಟ್ಟ ಹೆಜ್ಜೆಯೇ, ಯಮಪುರದೊಳಕ್ಕೆ ಇಟ್ಟಂತಾಯಿತು. ಆದರೆ ಅವನೇಕೆ ಅದನ್ನು ತಿಳಿಯುವನು?

ರಾವಣನು ಪಂಚವಟಿಗೆ ಹೊರಟನು. ಶೂರ್ಪನಖಿಯು ಅವನನ್ನು ತಡೆದಳು. 'ಒಬ್ಬನೆ ಹೋಗಬಾರದಷ್ಟೆ! ಖರ ದೂಷಣರು ಸಾಮಾನ್ಯರೆ? ಅವರು ರಾಮಬಾಣಕ್ಕೆ ಮಡಿದವರಲ್ಲವೆ? ಅದರಿಂದ, ಕೌಶಲ್ಯವೇ ಮೇಲು. ಸೀತೆಯನ್ನು ಹೇಗೂ ಕದ್ದೊಯ್ಯಬೇಕಾಯಿತು. ಕಾಡಾಡಿಗಳು ಮೂಢರು; ಧರ್ಮವೆಂದರೆ ಬಾಯಿಬಿಡುವರು. ಧರ್ಮಮೂಲಕ ಮೋಸಗೊಳಿಸಿ, ಸೀತೆಯನ್ನು ಲಂಕೆಗೆ ತಂದರೆ, ಅವರಿಬ್ಬರೂ ಅವಳನ್ನು ಹುಡುಕಿ ಬರಲಿ. ಪ್ರಾಣಪ್ರಿಯಳನ್ನು ಕಳೆದುಕೊಂಡರೆ ರಾಮನಿಗೆ ತಾನಾಗಿ ಪ್ರಾಣವು ಪ್ರಿಯ ವಾಗುವುದು. ಅಥವಾ, ಇಲ್ಲಿ ಬರುವಾಗ ಸಾಯಬಹುದು; ಬಂದರೆಂತೂ ಸಾಯಲೇ ಬೇಕು. ಇದು ಉತ್ತಮವೂ ಸುಲಭವೂ ತ್ವರೆಯಲ್ಲಿ ಸಾಧ್ಯವೂ ಆಗಿದೆ' ಎಂದಳು. ಹಾಗೆಯೆ ರಾವಣನು ನಿರ್ಧರಿಸಿದನು. ತನಗಾಗಿ ಇಷ್ಟು ಪ್ರಯಾಸಪಟ್ಟು ನೊಂದವಳ ಮಾತನ್ನು ಅಲ್ಲಗಳೆವುದೆ? ಅದೇ ಉಪಾಯ ಹೂಡಲು ರಾವಣನು ಹೊರಟು, ಪಂಚವಟಿಗೆ ಬಲು ಬೇಗನೆ ಬಂದನು.

ಬಹಳ ದಿನಗಳ ಹಿಂದೆ, ಜಿಂಕೆಯ ರೂಪವನ್ನು ಧರಿಸಿಕೊಂಡು, ರಾಮನ ಬಾಣಗಳಿಗೆ ಕಂಗಾಲಾಗಿ, ಅಯೋಧ್ಯೆಯ ರಾಜ್ಯವನ್ನು ಬಿಟ್ಟು ಜನಕರಾಜ್ಯಕ್ಕೆ ತಲೆ ತಪ್ಪಿಸಿಕೊಂಡು ಓಡಿದ ಮಾರೀಚನ ನೆನಪಿದೆಯೆ? ಅವನು ಅಂದೊಮ್ಮೆಗೆ ಜೀವಸಹಿತ ಉಳಿದುದೇ ಹೆಚ್ಚಾದುದೆಂದೂ, ಇನ್ನು ಈ ರಾಕ್ಷಸವೃತ್ತಿಯು ಬೇಡವೆಂದೂ, ಪಂಚವಟಿಯಲ್ಲಿ ಸನ್ಯಾಸಿಯಾಗಿ ಮುಕ್ತಿಸಂಪಾದಿಸಬೇಕೆಂದಿದ್ದನು. ರಾವಣನು ಆಗ ಕಪಟತನವನ್ನು ಕೈಕೊಳ್ಳಬೇಕಾದ ಕಾರಣ, ಅವನ ಸಹಾಯ ಕೇಳಿದನು. ವಿಶ್ವಾಮಿತ್ರನ ಯಜ್ಞಕಾಲದಲ್ಲಿ, ತನಗೆ ಪ್ರಾಣಸಂಕಟವು ರಾಮನಿಂದಲೆ ಉಂಟಾಯಿ ತೆಂಬುದನ್ನು ಅವನು ಇನ್ನೂ ಮರೆತಿರಲಿಲ್ಲ. ರಾಕ್ಷಸರ ಹಾವಳಿಯಿಂದ ಯಜ್ಞಗಳನ್ನು ರಾಮನು ರಕ್ಷಿಸಿದವನಾದ ಬಳಿಕ, ಖರ ದೂಷಣ ತ್ರಿಶಿರರನ್ನು ಕೊಂದಿಕ್ಕಿದ ಬಳಿಕ, ಅವನು ಭಗವಂತನೆ ಅಲ್ಲವೆ? ಮಾರೀಚನು ಸುಲಭ ದಲ್ಲಿ ರಾವಣನ ಮಾತಿಗೆ ಒಪ್ಪುವನೆ? ಒಪ್ಪದಿದ್ದರೆ, ರಾವಣನು ಅವನನ್ನು ಕೊಲ್ಲುವೆನೆಂದನು; ಒಪ್ಪಿದರೆ ರಾಮನ ಬಾಣಕ್ಕೆ ಬಲಿಯಾಗಬೇಕು. ಅಂತೂ ಮಾರೀಚನ ಮರಣದ ಗಳಿಗೆ ತುಂಬಿತು. ಊರಲ್ಲೆಲ್ಲ ಭಗ ವಂತನೇ ಎಂದು ಹೆಸರುಗೊಂಡ ರಾಮನ ಕೈಯಿಂದ ಮಡಿವುದೇ

ಲೇಸೆಂದು ಮಾರೀಚನು ನಿಶ್ಚಯಮಾಡಿದನು. ಅಂದಿನಂತೆ, ಸುಂದರವಾದ ಜಿಂಕೆಯಾಗಿ, ಮಾರೀಚನು ಆ ಪರ್ಣಶಾಲೆಯ ಕಡೆಗೆ ಬಂದನು.

ಜನ್ಮದಲ್ಲಿ ಕೊನೆಯ ಬಾರಿಗೆ ಎಂಬಂತೆ ಮಾರೀಚನು ಜಿಂಕೆಯುಂತಾದ ನಲ್ಲವೆ? ಆ ಜಿಂಕೆಯ ಬೆಡಗೇನು!

ತೋರಿದನು ತಾ ಬಳಿಕವಗೆ, ಹದಿ
ನಾರು ಬಣ್ಣದ ಪುಟದ ಚಿನ್ನಕೆ
ನೂರುಮಡಿಯೆನೆ ಹೊಳೆಹೊಳೆವ ಹೊಮ್ಮರಿಯ ರೂಪಕದ।
ಬೇರೆ ಬಿಚ್ಚಿದ ತಾಯ ತಾಣವ
ಮೀರಿ ತಳಪಟದೊಳಗೆ ಹಾತಕ
ವಾರುವಭಿನವ ಭಾವಭಂಗಿಯ ಬಹಳ ಕೌತುಕವ.

ಹೊಳೆಹೊಳೆವ ಕಿರುಗೊರಲುಗಳ ಥಳ
ಥಳಿಪ ರದನದ ತರಳನಯನದ
ಮಿಳಿರ್ವಕಿವಿಗಳ ಮಿಡುಕುವಂಘ್ರಿಯ ಮಿರುಪನಾಸಿಕದ।
ದಳಗತಿಯ ನಿರ್ಮಾಂಸಜಂಘೆಯ
ಲುಳಿಯುಲಾಗಿನ ಲಂಘನೆಯ ಲ
ವ್ವಳಿಪ ಹೊಸ ಜವ್ವನದ ಹೊಮ್ಮರಿ ಹೊಳೆದುದಿದಿರಿನಲಿ.

ಭಗವಂತನು ಉಂಟುಮಾಡಿರುವ ಯಾವ ಜಿಂಕೆಯೂ ಅದರಂತಿರಲಾರದು. ಕಾಮನ ಬಿಲ್ಲಿನ ಏಳು ಬಣ್ಣಗಳು ಅದರ ಚರ್ಮದ ಮೇಲೆ ನಲಿದಾಡು ತಿದ್ದುವು; ಅದರ ಕಣ್ಣುಗಳ ದೃಷ್ಟಿಯು ಎಂತಹರ ಕಣ್ಣನ್ನಾದರೂ ತನ್ನ ಕಡೆಗೆ ಮಿಂಚಿನ ವೇಗದಿಂದ ಸೆಳೆಯುತಿದ್ದಿತು; ಅದೂ ಅಲ್ಲದೆ ಅದು ಮೋಹನ ನಾಟ್ಯವಾಡುತಿದ್ದಿತು. ಭಂಗಾರದ ಚುಕ್ಕೆಗಳು ಅದರ ಮೈಯ ಮೇಲೆಲ್ಲ ಹೊಳೆಯುತಿದ್ದುವು. ಅಂತಹ ಹರಿಣವನ್ನು ಯಾವ ಸಾಧ್ವಿಯು ತಾನೆ ತನ್ನ ಬೇಸರ ನೀಗಿಸಿಕೊಳ್ಳಲು ಬಳಿಯಲ್ಲಿಟ್ಟುಕೊಳ್ಳಳು? ಅದೂ ಹಿಂದಿನಲ್ಲಿರದೆ, ಒಂದೇ ಆ ಪರ್ಣಕುಟೀರದ ಬಳಿ, ಸೀತೆಯ ಕಣ್ಣೆದಿರಲ್ಲಿ ಸುಳಿದಾಡುತ್ತಿದೆ. ಕಿವಿಗಳನ್ನು ನೆಟ್ಟಗೆತ್ತಿ ಹಿಡಿದು, ಅವಳನ್ನೆ ಕರೆಯುತಿದೆ! ಸೀತೆಯು ಚಂಚಲಚಿತ್ತಳಾದಳು. ತನಗೆ ಆ ಮೃಗವನ್ನು ತಂದುಕೊಡ ಬೇಕೆಂದಳು. ವನವಾಸದಲ್ಲಿ ನವೆಯುವವಳು, ಉದ್ಯಾನದಲ್ಲಿ ವಿಹರಿಸು

ವವಳು, ಈಗ ವನದಲ್ಲಿರುವಳು. ನೂರಾರು ಜಿಂಕೆಯ ಮರಿಗಳೊಡನೆ ಆಡುತ್ತಿದ್ದವಳಲ್ಲವೆ? ಅವಳ ಮಾತನ್ನು ಪೂರಯಿಸದಿರವುದೆ? ಆದರೆ ರಾಮನ ಬಾಣವು ನಾಟಿ ಅದು ಮಡಿದರೆ? ಸೀತೆಯು ಆಗಲಿ, ಅದರ ಚರ್ಮದಿಂದ ಮೃದುವಾದ ಕಂಚುಕವನ್ನು ಮಾಡಿ ತೊಟ್ಟುಕೊಳ್ಳುವಳು. ಅಂತೂ ಅದೇ ಬೇಕಾಗಿದೆ. ಮನಸ್ಸು ಸೋತಿದೆ. ರಾಮನು ಧನುರ್ಬಾಣಗಳನ್ನು ಧರಿಸಿಕೊಂಡು ಹೊರಟನು. ಲಕ್ಷ್ಮಣನು ಮನೆ ಯಲ್ಲಿ ಉಳಿದನು. ಶೂರ್ಪನಖಿಯಂತಹರಾರೂ ಬಂದರೆ? ಖರ ದೂಷಣರಂತೆ ಪರ್ಣಶಾಲೆಯನ್ನು ಆಕ್ರಮಿಸಿದರೆ? ಲಕ್ಷ್ಮಣನು ಅದ ಕ್ಕಾಗಿ ಕಾವಲಿರುವನು.

ರಾಮನು ಪರ್ಣಶಾಲೆಯಿಂದ ಹೊರ ಬಿದ್ದುದನ್ನು ಕಂಡೊಡನೆಯೆ, ಮೃಗವು ಎತ್ತಲೊ ಪಲಾಯನ ಮಾಡಿತು. ರಾಮನು ಅದನ್ನು ಹಿಂಬಾಲಿಸಿ ದನು. ಅದು ಅವನು ಹತ್ತಿರ ಬರುವ ತನಕವೂ ಕಾದುನಿಂತು, ಅಲ್ಲಿಂದ ಮತ್ತೆತ್ತಲೊ ಓಡುವುದು. ಹೀಗಾಗಿ ಆ ಮಾಯಾಮೃಗವು ರಾಮನನ್ನು ಬಹು ದೂರಕ್ಕೆ ಸೆಳೆದೊಯ್ದಿತು. ಇನ್ನು ಇದನ್ನು ಜೀವದಿಂದ ಹಿಡಿ ದೊಯ್ಯಲಾಗುವುದಿಲ್ಲೆಂದು ರಾಮನು ತಿಳಿದನು; ಇನ್ನು ಜೀವಹಿಡಿದು ಇರಲಾಗುವುದಿಲ್ಲೆಂದು ಮಾರೀಚನೂ ತಿಳಿದನು. ರಾಮನು ಬಾಣ ಹೂಡಿ ಬಿಟ್ಟನು. ಮಾರೀಚನು ವೇಷಕಳಚಿ, ಅತ್ತ ರಾವಣನಿಗಾಗಿ ತಾನು ಮಡಿದೆನೆಂದು ಮುಂದೆ ತಿಳಿಯುವ ಹಾಗೆಯೂ, ರಾವಣನಿಗೆ ಅವನ ಹಂಚಿಕೆಯು ಸಫಲವಾಗುವ ಹಾಗೆಯೂ, ರಾಮನ ಕೊರಲಧ್ವನಿಯಲ್ಲಿಯೆ, 'ಹಾ ಲಕ್ಷ್ಮಣ! ಹಾ ಸೀತೆ!' ಎಂದು ಬಲವಾಗಿ ಕೂಗಿ, ನಾಟಿದ ಬಾಣಕ್ಕೆ ಬಿದ್ದು, ರಾಮಧ್ಯಾನವನ್ನು ಮಾಡುತ್ತ ಮಡಿದನು. ರಾಮನಿಗೆ ಇದೆಲ್ಲವೂ ವಿಚಿತ್ರವೆನಿಸಿತು.

ಮಾರೀಚನು ಮಾಯಾವಿಯಲ್ಲವೆ? ಮೃಗದೊಡನೆ ಪತಿಯು ಮರಳುವನೆಂದು ನಂಬಿಕೊಂಡಿದ್ದ ಸೀತೆಗೆ ಈ ಕೂಗು ಕೇಳಿಸಿದ್ದೇ, ಅವಳ ಎದೆ ಹಾರಿತು! ಲಕ್ಷ್ಮಣನೂ ಕೇಳಿ, ಸ್ವಲ್ಪ ದಿಗಿಲುಗೊಂಡನು. ಇದೆಲ್ಲಿಯ ವಿಪತ್ತು? ರಾಮನನ್ನು ಜಯಿಸುವವರು ಇರುವರೆ? ಸೀತೆಯು 'ವತ್ಸಾ, ಬೇಗನೆ ಅತ್ತ ತೆರಳಿ ಆರ್ಯಪುತ್ರನ ವಿಪತ್ತು ನಿವಾರಿಸಿ, ಒಡಗೂಡಿ

ಬರುವನಾಗು!' ಎಂದಳು. ಲಕ್ಷ್ಮಣನು 'ಲೋಕವೆಲ್ಲವೂ ಸೇರಿದರೂ ಯಾವನನ್ನು ನೋಯಿಸಲಾರದೊ ಅವನಿಗೆ ವಿಪತ್ತುಗಳೆಲ್ಲಿ? ಇರಬಹು ದಾದರೂ ಅವುಗಳನ್ನು ನಿವಾರಣೆಮಾಡಲು ನಾನು ಒದಗಬೇಕಾಗುವುದೆ? ಇದೆಲ್ಲವೂ ಸುಮ್ಮನೆ! ಅವನೀಗಲೆ ಬರುವನು' ಎಂದನು.

ಅಣ್ಣನ ಮಾತನ್ನು ಮೀರಿ, ಸೀತೆಯೊಬ್ಬಳನ್ನೇ ಅಲ್ಲಿ ಬಿಟ್ಟು ತಾನು ತೆರಳುವುದು ಉಚಿತವಲ್ಲವೆಂದು ಅವನ ಭಾವನೆ. ಸೀತೆಯ ದುಃಖವು ಮಿತಿ ಯಿಲ್ಲದುದಾಯಿತು. ಅವಳು ಉಚಿತಅನುಚಿತಗಳನ್ನು ಎಣಿಸಳು.

'ಕೇಳಿದ್ಯೆ, ಸೌಮಿತ್ರಿ! ಮಿತ್ರವಿ-
ಶಾಲ ವಂಶೋದ್ಭವನ ವಚನದ
ಹಾಳಿಯನು—'ಹಾ ಸೀತೆ!, ಹಾ ಸೌಮಿತ್ರಿ! ಎಂಬುದನು।
ಓಲಗಸ್ಥಿರವಾಗದೆಲೆ ಭೂ
ಪಾಲನೇನಾದನೊ ಮಹಾಗ್ನಿ
ಜ್ವಾಲೆಜಠರದೊಳುಕ್ಕುತಿದೆ ತನಗೆ'ಂದಳಿಂದು ಮುಖಿ.

'ಅಕಟ ಲಕ್ಷ್ಮಣದೇವ! ರಘುನಾ-
ಯಕನ ಮರಣದನುಡಿ ನಿನಗೆ ರಂ-
ಜಕವೆ ರಾಗವೆ ರಹಿಯೆ ರಸಭಾವಕವೆ ರುಚಿಕರವೆ।
ವಿಕಳಗೊಂಡುದೆ ವಿಷಯವೆನ್ನಲಿ
ಯುಕುತಿಯಂತರವೇನು? ಸಾಪ
ತ್ನಕೆ ಇದೇತಕೆ ಸೊಗಸ ತಂದ್ಯೆ!' ಎಂದಳಿಂದು ಮುಖಿ.

'ಅಣ್ಣನು ಪ್ರಾಣಭಯದಲ್ಲಿರುವನು. ಮಡಿದರೆ ಮಡಿಯಲಿ! ನೀನು ನನ್ನೊ ಡನೆ ಸುಖವಾಗಿರುವೆಯೆಂದು ಹೀಗೆ ಹೇಳುವೆಯೊ?' ಎಂದು ಕಠಿನ ಮಾತನ್ನು ಆಡಿದಳು. ಅವಳು ದುಃಖದಿಂದ ವಿಚಾರವಿಲ್ಲದಿದ್ದಳು. ಲಕ್ಷ್ಮಣನು ಇನ್ನು ಅಲ್ಲಿ ನಿಲ್ಲಲಾರದೆ, ಧನುರ್ಬಾಣಗಳನ್ನು ಧರಿಸಿಕೊಂಡು 'ಅಮ್ಮಾ! ಹೊಸ್ತಿಲನ್ನು ಮಾತ್ರ ದಾಟಿ ಹೊರಕ್ಕೆ ಬಾರದೆ ಧೈರ್ಯವಾಗಿರಿ. ನಾನು ಅಣ್ಣನನ್ನು ಕರೆದುಕೊಂಡು ಈಗಲೆ ಬರುವೆನು' ಎನ್ನುತ್ತ, ಅವಳನ್ನು ವಂದಿಸಿ, ಆ ಧ್ವನಿ ಕೇಳಿಸಿದ ದಿಕ್ಕಿಗೆ ಬಹು ವೇಗವಾಗಿ ತೆರಳಿದನು.

ಅದುವರೆಗೆ ರಾವಣನು ಎಲ್ಲಿದ್ದನು ? ಅವನು ದೂರದ ಆಲದ ಮರದ ಬೇರು ಕಂಬಗಳ ನಡುವಿನಿಂದ ಎಲ್ಲವನ್ನೂ ನೋಡಿ ಸಮಯ ಕಾಯು ತಿದ್ದನು. ಮಾರೀಚನು ಮೃಗವಾದುದನ್ನು ನೋಡಿದನು. ರಾಮನು ಅದಕ್ಕಾಗಿ ಹೊರಬಿದ್ದುದನ್ನು ನೋಡಿದನು. ಮಾರೀಚನು ಸಾಯುವಾಗ ಕೂಗಿದುದನ್ನೂ, ಲಕ್ಷ್ಮಣನು ಕುಟೀರದಿಂದ ಹೊರಟುದನ್ನೂ, ತಿಳಿದನು. ಇದೇ ಅವನಿಗೆ ಯೋಗ್ಯ ಸಮಯವಲ್ಲವೆ? ಶೂರ್ಪನಖಿಯು ಹೇಳಿದಂತೆಯೆ ಆಯಿತು. ಅವಳ ಬುದ್ಧಿಯನ್ನು ಹೊಗಳಿದನು. ಮಾರೀಚನು ಮಡಿದುದಕ್ಕೆ ಅವನು ಪಶ್ಚಾತ್ತಾಪಗೊಳಲಿಲ್ಲ. ತಾನು ಸನ್ಯಾಸೀ ವೇಷವನ್ನು ಧರಿಸಿ ಕೊಂಡು (ಸೀತೆಯು ಧರ್ಮಪ್ರಿಯಳೆಂದು ಸೋದರಿ ಹೇಳಿಲ್ಲವೆ ?) ಆ ಎಲೆಮನೆಯ ಕಡೆಗೆ ಬಂದನು. 'ಭವತಿ ಭಿಕ್ಷಾಂದೇಹಿ!' ಎಂದು ಕೂಗಿ ದನು. ಪತಿಗೆ ವಿಪತ್ತಾದಾಗ ಸತಿಯರು ವಿಶೇಷ ಧರ್ಮಬುದ್ಧಿಯುಳ್ಳ ವರಾಗುವರು. ಸೀತಾದೇವಿಯು ಈ ಸನ್ಯಾಸಿಯ ಕೂಗಿಗೆ ಮರುಳಾಗಿ, ಹೊರಕ್ಕೆ ನೋಡಿದಳು. ದಿವ್ಯ ಜಟಾವಲ್ಕಲಧಾರಿ! ವಿಭೂತಿ ಬಳಿದು ಕೊಂಡು ದೊಡ್ಡ ಪರಮೇಶ್ವರನಂತೆ ಕಾಣುವನು. ಅವನನ್ನು ಪೂಜಿಸದೆ ಬಿಡುವುದೆ ? ಭಿಕ್ಷ್ಯವನ್ನು ತವಕಗೊಂಡು ಮನೆಯೊಳಗಿದ್ದೇ ನೀಡಿದಳು. ಅವನು ಒಲ್ಲನು. 'ಹೊರಕ್ಕೆ ಬಂದು ನೀಡದಿದ್ದಲ್ಲಿ ಅದು ದಾನವಲ್ಲ, ಕಳವು ಮಾಡಿದಂತಾಗುವುದು' ಎಂದನು. ಮೈದುನನ ಮಾತು ಮೀರು ವುದೆ? ಬರಲಾರೆನೆಂದಳು. 'ಬಾರದಿದ್ದರೆ ನಾನು ನಿರಾಶನಾಗಿ ಉಪವಾಸ ಬೀಳುವೆನು' ಎಂದನು. ಇದು ಮಹಾಪಾಪವು! ಬಾಗಿಲಿಗೆ ಬಂದ ಭಿಕ್ಷುಕನಿಗೆ ಧರ್ಮನೀಡದೆ ಅವನು ಉಪವಾಸಿಯಾದರೆ, ಧರ್ಮಕ್ಕೆ ಹಾನಿಯಾಯಿತೆಂದೂ, ಅತ್ತ ಪತಿಗೆ ಸಂಕಟವೊದಗಿದಾಗ ಪಾಪ ಕಟ್ಟಿ ಕೊಳ್ಳುವುದು ಸರಿಯಲ್ಲವೆಂದೂ ಅವಳು ಮೆಲ್ಲನೆ ಹೊರಬಂದಳು. ಸೀತಾ ದೇವಿಯು ಭಿಕ್ಷ್ಯವನ್ನು ನೀಡಿದಳು.

ಅಡಗಿತಾಕ್ಷಣ ದಂಡ; ಮೆಲ್ಲನೆ
ಸಡಿಲಿಹೊದ್ದಿತು ಕರಕಮಂಡಲ;
ಮಿಡುಕುನಿಂದುದು ಬೆರಲನಾಮಸ್ಮರಣಗಳು ಹರನ।

ಸಿಡಿದು ಜಾರಿತು ಜಡೆಯು ಜಾಡ್ಯದ
ತೊಡರು ಹರಿದು ವಯೋವಿಲಾಸದ
ಜಡೆಯು ತಾಪಸಿಯಾಗೆ ಮನದಲಿ ಹೆದರಿದಳು ಸೀತೆ.||

ಅವಳ ಆ ಬಲತೋಳನ್ನೆ ರಾವಣನು ಬಲವಾಗಿ ಹಿಡಿದು, ಎಡಗೈಯಿಂದ ಅವಳ ಸೊಂಟವನ್ನು ಬಿಗಿದು, ಅವಳನ್ನು ತನ್ನ ಹೆಗಲಲ್ಲೆತ್ತಿಕೊಂಡನು. ಅವಳು ಬಾಯ್ಬಿಟ್ಟಳು. ಕೋಮಲೆಯಾದ ಅಬಲೆ; ಇವನು ದಿಗ್ವಿಜಯ ಮಾಡಿದ ಶೂರನು. ಇವನನ್ನು ತಡೆಯಲಾಗುವುದೇ? ಅವಳನ್ನೆತ್ತಿ ಕೊಂಡು ನಡೆದು ತನ್ನ ವಿಮಾನವನ್ನೇರಿದನು. ವಿಮಾನವನ್ನು ಬಲು ರಭಸದಿಂದ ಲಂಕೆಯ ಕಡೆಗೆ ಹಾರಾಡಿಸಿದನು. ಸೀತೆಯು ಕೂಗಾಡಿದಳು. ಗರುಡನ ಕೊಕ್ಕಿನಲ್ಲಿ ಸಿಲ್ಕಿದ ಕೋಗಿಲೆಯ ಪಿಳ್ಳೆಯಂತೆ ಅರಚಿಕೊಂಡಳು.

ಸೀತೆಯು ರಾಮಲಕ್ಷ್ಮಣರಿಗೆ ಕೂಗಿಕೊಂಡರೆ, ಅವರಿಗೆ ಕೇಳಿಸು ವುದೆ? ಅವಳು ದೇವತೆಗಳಿಗೂ ಮೊರೆಯಿಟ್ಟಳು. ಅವಳ ಆರ್ತನಾದವು ಯಾರ ಕಿವಿಯೊಳಕ್ಕೂ ಹೋಗದಂತೆ ರಾವಣನ ವಿಮಾನವು ದೂರದೂರಕ್ಕೆ ಹಾರಿತು. ವನಮಧ್ಯದಲ್ಲಿ ಆರ್ಯ ರಾಜರುಗಳೆಲ್ಲಿರುವರು? ಆರ್ಯ-ಅನಾರ್ಯರ ಸೀಮೆಯು ಎಲ್ಲೆಕಟ್ಟಿಗೆ ವಿಮಾನವು ತಲಪಿತು. ಆಗ—

'ಸೆಳೆವುತಿದೆ ಕಾಳ್ಗಿಚ್ಚು ಕಡುಕೋ-
ಮಲದ ಲತೆಯನು; ಕೊರಲಹಿಡಿದೆಳೆ-
ದುಲಿವುತಿದೆ ಹೆಬ್ಬುಲಿ ಸುಧೇನುವ ! ಅಕಟ, ಬಲುಕರಿಸಿ।
ಬಳಲುತಿದೆ ದುಷ್ಕೀರ್ತಿ ಕೀರ್ತಿಯ !
ಎಲೆ ರಘುಕ್ಷಿತಿನಾಥ, ಬಿಡಿಸೈ !
ಖಳನ ಸೆರೆಯುಂಗನೆಯ' ಎಂದೊರಲಿದಳು ನಳಿನಾಕ್ಷಿ.

ಈ ದುಃಖಧ್ವನಿಯನ್ನು ಕೇಳಿದವನೊಬ್ಬನೆ ಜಟಾಯು. ಇವನು ಹಕ್ಕಿಯಂತೆ ಹಾರಿ ರಾವಣನ ವಿಮಾನಕ್ಕಡ್ಡನಿಂತನು. ಬಲೆಗೆ ಬಿದ್ದ ಸೋಗೆ ನವಿಲಿನಂತೆಯೂ, ಸಿಂಹದ ಕೈಗೆ ಬಿದ್ದ ಹರಿಣಿಯಂತೆಯೂ ಬಾಯಿ ಬಿಡುತಲಿದ್ದ ಸೀತೆಯನ್ನು ಕಂಡು,—'ಎಲಾ ಖೂಳಾ! ಪರಸ್ತ್ರೀಯನ್ನು ಅಪಹರಿಸಿ ಮಹಾಪಾಪವನ್ನು ಮಾಡಿದೆಯಾ? ನಿನ್ನಂತಹರ ಕೈಯಿಂದ ಯಮಧರ್ಮನು ಕಾಸಿದ ಕುಳವನ್ನೆ ಹಿಡಿಸುವನು. ಎಳಗೂಸು ಕಾಳ

ಸರ್ಪವನ್ನು ಹಿಡಿದಂತೆ, ಈ ದೇವಿಯನ್ನು ಏತಕ್ಕೆ ಹಿಡಿದೆ? ಬಿಡು, ಪ್ರಾಣ ದಾಸೆಯಿದ್ದರೆ ಬಿಡು!' ಎಂದು ಜಟಾಯುವು ರಾವಣನಿಗೆಂದನು. ಅವ ನೆಲ್ಲಿ ಕೇಳುವನು? ಸಿಕ್ಕಿದ ಸುಂದರಿಯನ್ನು ಹಕ್ಕಿಯ ಮಾತಿಗೆ ಹೋಗ ಗೊಡುವುದೆ? ದಾರಿ ಬಿಡೆಂದನು. ಅವನು ಬಿಡೆನೆಂದನು. ಹೊಡೆ ದಾಟವಾಯಿತು. ಅವನು ಕೊಕ್ಕಿನಿಂದಲೂ ಇವನು ಕತ್ತಿಯಿಂದಲೂ ತಿವಿ ದರು. ಕತ್ತಿಗೆ ಜಯವಾಯಿತು. ಜಟಾಯು ಅರೆಮಡಿದನು. ರಾವಣನು ಒಡನೆಯೆ ಲಂಕೆಗೆ ಮುಂದುವರಿದನು.

ಪಂಚವಟಿಯಲ್ಲಿ ಮಾರೀಚನ ಅರ್ತನಾದದ ಕಪಟತ್ವವನ್ನು ರಾಮನು ತಿಳಿದೊಡನೆಯೆ, ಇನ್ನಲ್ಲಿದ್ದರೆ ಪ್ರಮಾದವಾಗುವುದೆಂದು ಬೆದರಿ, ತನ್ನ ಪರ್ಣ ಕುಟೀರದ ಕಡೆಗೆ ಮರಳಿದನು. ಮನಸ್ಸಿನಲ್ಲಿ ಭಯ; ಆದರೂ ತಮ್ಮನ ಮೇಲೆ ಭರವಸೆಯಿಂದ ಧೈರ್ಯ. ಅವನು ಮರುಳುತಿರುವಾಗಲೆ, ದಾರಿ ಯಲ್ಲಿ ಲಕ್ಷ್ಮಣನನ್ನು ಕಂಡು, ಅವನ ತಲೆ ತಿರುಗಿತು. ಮೋಸವಾಗು ವುದು ನಿಶ್ಚಯವಲ್ಲವೆ? ಲಕ್ಷ್ಮಣನನ್ನು ಜತೆಯಲ್ಲಿಟ್ಟು, ಅಲ್ಲಿಂದಲೆ ಅವ ಸರವಾಗಿ ಮರಳುತ್ತ ಎಲ್ಲವನ್ನೂ ವಿವರಿಸಿದನು. ಲಕ್ಷ್ಮಣನೂ ಬೊಟ್ಟನ್ನು ಕಚ್ಚಿಕೊಂಡು ನಾನಾ ವಿಧ ಭಾವಿಸಿ ಬೆದರಿದನು. ಅಂತೂ ಮನೆಗೆ ಮರಳಿದರು. ರಾಮನು ಮನೆಯೊಳಕ್ಕೆ ಹಾರಿದನು. 'ಸೀತೆಯಿಲ್ಲ! ಹಾ! ಏನಾಯಿತು?' ಎಂದನು. ಮಾತೆತ್ತದೆ ಅತ್ತುಕೊಂಡನು. ಲಕ್ಷ್ಮಣ ನನ್ನು ಜರೆದನು. ಫಲವೇನು? ಇಬ್ಬರೂ ಅತ್ತಿತ್ತ ಸೀತೆಯನ್ನು ಹುಡು ಕುತ್ತ ನಡೆದರು. ಸೀತೆಯಿಲ್ಲದೆ ಸೀತಾರಾಮನು ಎಂತೊಪ್ಪುವನು?

ಘನಮದೋತ್ಕಟ ಧಾರೆಯಿಲ್ಲದೆ
ವನ ಮದದ್ವಿಪವುಂಟೆ? ತೀಕ್ಷ್ಣ-
ವಿನುತ ಧೀದಿತಿಯಿಲ್ಲ ದಿನನುಂಟೇ ಜಗತ್ತಿನಲಿ?।
ವನಜವಿಲ್ಲದ ಕೊಳನು, ವರವಾ-
ಹಿನಿಗಳಿಲ್ಲದ ವಾರ್ಧಿ, ಸೀತಾ
ವನಿತೆಯಿಲ್ಲದ ರಾಮನುಂಟೇ ಭೂಮಿಯೊಳಗೆಂದ.

ಕುಟೀರವು ಇದ್ದಂತೆಯೆ ಉಳಿಯಿತು. ಧನುರ್ಧಾರಿಗಳಿಬ್ಬರೂ ಹೊರಟರು. ಆಗ ರಾಮನು:—

**ಕಳಹಂಸಾಲಸಯಾನೆಯಂ ಮೃಗಮದಾಮೋದಾಸ್ಯ ನಿಶ್ವಾ
ಸೆಯಂ
ತಳಿರೇ, ತಾವರೆಯೇ, ಮದಾಳಿಕುಲಮೇ, ಕನ್ನೈದಿಲೇ,
ಮತ್ತ-ಕೋ-
ಕಿಳಮೇ, ಕಂಡಿರೆ ಪಲ್ಲವಾಧರೆಯಸಂಭೋಜಾಸ್ಯೆಯಂ
ಭೃಂಗಕುಂ-
ತಳೆಯಂ ಕೈರವನೇತ್ರೆಯಂ ಪಿಕರವಪ್ರಖ್ಯಾತೆಯಂ ಸೀತೆಯಂ?**

ಎಂದು ಹಂಬಲಿಸುತ್ತ ಭ್ರಮೆಗೊಂಡು ವಿಚಾರಿಸುತ್ತ ಮುನ್ನಡೆದನು. ಲಕ್ಷ್ಮಣನು ಅಣ್ಣನನ್ನು ಸೈರಿಸು-ಸೈರಿಸೆನ್ನುತ್ತಲೂ, ಅವನೊಡನೆ ತಾನೂ ಅಳುತ್ತ ಅವನಿಗಾಧಾರನಾಗಿ ಸಂಗಡ ಬಂದನು. ಅವರು ಎಷ್ಟು ವನಾಂತರಗಳನ್ನು ತಿರುಗಿದರು! ಕೊನೆಗೆ ರೆಕ್ಕೆಹರಿದ ಜಟಾಯುವು ಮೇಲುಸಿರಿನಿಂದ ಹೇಳಿದ ವೃತ್ತಾಂತವನ್ನು ಕೇಳಿದರು. ಅವನು ಕೂಡು ವಷ್ಟು ವಿವರಿಸಿ ಮೃತನಾಗಲು, ಇವರಿಬ್ಬರೂ ಪರಮ ಉಪಕಾರಿಯಾದ ಅವನನ್ನು ದಹಿಸಿ, ನದೀಜಲದಲ್ಲಿ ತರ್ಪಣವನ್ನು ಕೊಟ್ಟರು. ರಾಮ ಲಕ್ಷ್ಮಣರು ಉಪಕಾರಿಯನ್ನು ಹೇಗೆ ಸನ್ಮಾನಿಸಿದರು! ಜಟಾಯುವು ಯಾವನೊ, ಎಂತಹನೊ! ಆದರೂ ಇಂತಹ ಲೋಕವಿಖ್ಯಾತರಾದವರು ಅವನ ಉತ್ತರಕ್ರಿಯೆಯನ್ನು ಮಾಡಿದುದು ಲೋಕಾನುಸರಣೆಗೆ ಪಾತ್ರವಲ್ಲವೆ? 'ಸೀತೆಯನ್ನು ಒಯ್ದುದಕ್ಕೆ ಅವನನ್ನು ದಂಡಿಸುತಿದ್ದೆನು ಮಾತ್ರ; ಆದರೆ ಎಂದಿಗೆ ರಾವಣನು ಸಾಮಾನ್ಯನಾದ ಈ ಧರ್ಮಾತ್ಮನನ್ನು ಕೊಂದನೊ, ಅಂದಿಗೆ ಅವನಿರುವುದೇ ಭೂಮಿಗೆ ಭಾರವು. ಅವನನ್ನು ಕೊಂದೇ ಸೀತೆ ಯನ್ನು ತರುವೆನು' ಎಂದು ಅಲ್ಲೇ, ತರ್ಪಣದ ನೀರನ್ನು ಕೈಯಲ್ಲಿ ಹಿಡಿದೇ, ರಾಮನು ಪ್ರತಿಜ್ಞೆಮಾಡಿದನು.

ಇನ್ನು ಸೀತೆಯಿಲ್ಲದ ಆ ಕುಟೀರದ ಕಡೆಗೆ ಮರಳುವುದೆ? ಸಂಜೆ ಯಾಗಲು, ಅಲ್ಲಿದ್ದ ಅದೊಂದು ವಟವೃಕ್ಷದ ನೆರಳಲ್ಲಿ ಅವರಿಬ್ಬರೂ ಪವಡಿಸಿ ದರು. ಸೀತಾಶೋಕದಿಂದಲೂ, ಅಪಮಾನದಿಂದಲೂ ಒಂದೆವೆ ನಿದ್ದೆಯೂ ಹತ್ತದಾಯಿತು. ಚಿಂತಾಕ್ರಾಂತನಾದ ರಾಮನು 'ಯಾವನು ತನ್ನೊಬ್ಬಳೇ ಭಾರ್ಯೆಯನ್ನು ಕಾಪಾಡಲಾರದೆ ಹೋದನೊ ಅಂತಹನು ಕೋಟಿಕೋಟಿ

ಪ್ರಜೆಗಳನ್ನು ಹೇಗೆ ಪಾಲಿಸುವನು ? ರಾಕ್ಷಸರು ಇದೇ ರೀತಿಯಾಗಿ ಎಷ್ಟು ಕೋಟಿ ಪರಸ್ತ್ರೀಯರನ್ನು ಕದ್ದೊಯ್ದು ಎಷ್ಟು ಮನೆಗಳನ್ನು ಸ್ಮಶಾನಗಳನ್ನಾಗಿ ಮಾಡಿರುವರೊ ತಿಳಿಯದು. ಪರಸ್ತ್ರೀಯರನ್ನು ಬಯಸಿದವನಿಂದ ಅಖಂಡವಾದ ಪ್ರಾಯಶ್ಚಿತ್ತವನ್ನು ಮಾಡಿಸುವುದೇ ರಾಜರ ಕರ್ತವ್ಯವು. ಅದರಿಂದ ಇದೇ ಇನ್ನು ನನ್ನ ಕಾರ್ಯೋದ್ದೇಶವು! ಇಂತಹ ಕಾರ್ಯೋದ್ದೇಶದ ಅರಿವನ್ನು ನನ್ನಲ್ಲಿ ಹುಟ್ಟಿಸಿದ ಕೈಕಯೀಮಾತೆಯವರಿಗೆ ಸಾಷ್ಟಾಂಗ ನಮಸ್ಕಾರವು!' ಎಂದು ಲಕ್ಷ್ಮಣನಿಗೆ ಹೇಳಿದನು.

ಲಕ್ಷ್ಮಣನು 'ಅಣ್ಣಾ, ತಮ್ಮಂತಹ ವೀರನು ಈ ಜಗತ್ತಿನಲ್ಲಿ ಇನಾರಿರುವನು ? ಹಾಗಿದ್ದರೂ ಸುಮ್ಮನೆ ನಿಂದಿಸಿಕೊಳ್ಳುವುದು ವಿಹಿತವಲ್ಲ. ಅಯೋಧ್ಯಾರಾಜ್ಯವೊಂದೇಕೆ, ಇಡೀ ಜಗತ್ತನ್ನು ಪರಿಪಾಲಿಸಲು ತಾವು ಸಮರ್ಥರು. ದುಃಖ ಚಿಂತೆಗಳಿಂದ ಫಲವಿಲ್ಲ; ಅದೆಲ್ಲವೂ ಹೇಡಿಗಳ ಉದ್ಯೋಗವು. ಸ್ವಪೌರುಷದ ಮೇಲೆಯೇ ನಿರ್ಭರರಾಗಿ ಪ್ರತೀಕಾರವನ್ನು ಮಾಡುವುದು ತಮ್ಮಂತಹ ಮಹಾತ್ಮರ ಕರ್ತವ್ಯಲಕ್ಷಣವು. ಆದುದರಿಂದ ಬೆಳಕು ಹರಿಯುತ್ತಲೆ, ರಾವಣನ ನಿವಾಸದ ಕಡೆಗೆ ನಡೆಯೋಣ. ಅನಂತರ ಅವನನ್ನು ಕೊಂದೇ ಸೀತಾಮಾತೆಯನ್ನು ಊರಿಗೆ ಕರೆದುಕೊಂಡು ಮರಳುವುದು ಸಹಜವಲ್ಲವೆ?' ಎಂದು ಬಿನ್ನಯಿಸಿದನು. ಲಕ್ಷ್ಮಣನ ಮಾತುಗಳು ರಾಮನಲ್ಲಿ ಧೈರ್ಯವನ್ನೂ ಶಾಂತಿಯನ್ನೂ ಉಂಟುಮಾಡಿದುವು. ಉಳಿದ ರಾತ್ರಿಯನ್ನು ಇಂತಹ ಮಾತುಕಥೆಯಲ್ಲಿಯೆ ಕಳೆದು ಬೆಳಗಿನ ಜಾವದಲ್ಲಿ ಮುನ್ನಡೆದರು.

ಅಲ್ಲಿ ದಾರಿಗೆ ಅಡ್ಡವಾಗಿ ಕಬಂಧನೊಬ್ಬನು ನಿಂತಿದ್ದನು. ಲಕ್ಷ್ಮಣನು ಅವನನ್ನು ತ್ವರೆಯಲ್ಲಿ ಕೊಂದನು. ಅವನು ಸಾಯುವಾಗ 'ರಾಜಪುತ್ರರೆ! ನಾನು ನಿಜವಾಗಿ ರಾಕ್ಷಸನಲ್ಲ! ಇದು ಪಾಪದ ಫಲವು. ನಾನು ಮಡಿವಂತೆ ನೀವು ಮಾಡಿದುದೇ ಉಪಕಾರ. ಸುಗ್ರೀವನೆಂಬ ವಾನರರಾಜನ ಸಹಾಯದಿಂದ ರಾವಣನನ್ನು ಗೆಲ್ಲುವುದು ಸುಲಭ. ಅವನು ಋಷ್ಯಮೂಕ ಪರ್ವತದಲ್ಲಿರುವನು' ಎಂದು ತಿಳುಹಿದನು. ರಾಮಲಕ್ಷ್ಮಣರು ಇದೂ ಒಂದು ವಿಚಿತ್ರವೆಂದು ಆ ಪರ್ವತದ ಕಡೆಗೆ ನಡೆದರು.

ಅಲ್ಲಿಂದ ಮುಂದೆ ಎಷ್ಟು ವನಗಳನ್ನು ದಾಟಬೇಕಾಯಿತು!

ಅಲ್ಲೇ ಶಬರಿಯ ಆಶ್ರಮ. ತಾಪಸಿಯಾದ ಇವಳು ಶ್ರೀರಾಮನು ಬರುವುದನ್ನು ಹೇಗೋ ತಿಳಿದು, ಅಂತಹ ದಿವ್ಯಗುಣಶಾಲಿಯನ್ನು ಉಪಚರಿಸಬೇಕೆಂದು ಅವನು ಬರುವ ದಾರಿಯನ್ನು ಇದಿರುನೋಡುತ್ತಲಿದ್ದಳು. ಇವರು ಅತ್ತ ಬರುತ್ತಲೆ, ತನ್ನ ಆಶ್ರಮದ ಎಲೆಮನೆಗೆ ಕರೆದೊಯ್ದು ಅವರನ್ನು ಹಣ್ಣುಹಂಪಲುಗಳಿಂದ ಸತ್ಕರಿಸಿದಳು. ಅವಳ ನಿಷ್ಕಪಟ ಭಕ್ತಿಗೆ ಇವರು ಮೆಚ್ಚಿ, ಅವಳನ್ನು ಹರ್ಷಗೊಳಿಸಿದರು. ಅವಳಾದರೂ, ಸೀತಾಪಹಾರದ ವಿಷಯವನ್ನು ತಿಳಿದುಕೊಂಡು, ಕಬಂಧನೆಂದಂತೆ ವಾನರರಾಜನ ಸಹಾಯದಿಂದ ಸೀತೆಯು ಇವರಿಗೆ ಪುನಃ ದೊರೆವಳೆಂದಳು.

ಕೊನೆಗೆ ರಾಮಲಕ್ಷ್ಮಣರು ಮುನ್ನಡೆದರು. ಅಲ್ಲಿಯೆ ಮತಂಗ ಮುನಿಯ ಆಶ್ರಮವು. ಸಮೀಪದಲ್ಲಿಯೇ ಪಂಪಾಸರೋವರವು. ಅದರ ಇದಿರಿನಲ್ಲಿಯೆ ಋಷ್ಯಮೂಕ ಪರ್ವತವು. ಅದರ ಮೇಲೆಲ್ಲ ಕಪಿಧ್ವಜರಾದ ವಾನರರು. ಆ ನವೀನ ದೃಶ್ಯವನ್ನು ನೋಡುತ್ತ, ತಮ್ಮ ವನವಾಸದ ಕುಟೀರದ ನೆನಪು ಉಂಟಾಗಲು, ರಾಮಲಕ್ಷ್ಮಣರು ತಮ್ಮಲ್ಲಿದ್ದ ದುಃಖವನ್ನು ಮರೆತರೂ, ರಾಮನು 'ಹಾ, ಸೀತೆ!' ಎಂದನು; ಲಕ್ಷ್ಮಣನು, 'ಹಾ, ಸೀತಾಮಾತೆ!' ಎಂದು ನಿಟ್ಟುಸುರಿಟ್ಟನು.

ರಾವಣನೇನು ಮಾಡಿದನು ? ಲಂಕೆಗೇ ತೆರಳಿದನು. ಯಾರೂ ತಡೆಯದಂತೆ, ಎಲ್ಲರ ನಿವಾಸಗಳಿಂದ ಕೊಂಚ ದೂರವಾಗಿಯೆ ವಿಮಾನವನ್ನು ನಡೆಸಿದನು. ಲಂಕೆಯನ್ನು ತಲಪಿದನು. ಅವನ ಆನಂದವು ಉಕ್ಕಿಬರುತಿದ್ದಿತು. ತನ್ನ ಕೊಯ್ದು ಮೂಗಿನ ಎರಡೂ ಸೊಳ್ಳೆಗಳಿಂದಲೆ ಶೂರ್ಪನಖಿಯು ಸೀತೆಯನ್ನು ನೋಡಿದಳೊ ಎಂಬಂತೆ ಅವಳನ್ನು ಕಾಣುತ್ತಲೆ 'ಯಿಂ ನ್ಹಳೆಂ ಹಂ ನ್ಹಳುಂ' ಎಂದು ಅಣ್ಣನಿಗೆ ಹೇಳಿದಳು. ಅಣ್ಣನು ಅವಳನ್ನು ಬಹಳವಾಗಿ ಕೊಂಡಾಡಿದನು. ಪಾಪಾತ್ಮರಿಗೆ ಸಹಾಯ ಮಾಡಿದ ಪಾಪಿಗಳನ್ನೆ, ಅವರು ಕೊಂಡಾಡುವರು. ಸೀತೆಯನ್ನು ಅಶೋಕವನದಲ್ಲಿ ರಾಕ್ಷಸಿಯರ ಕಾವಲಿನಲ್ಲಿ ಇರಿಸಲಾಯಿತು. ಕಾಡಾನೆಯನ್ನು ಹಿಡಿದು ಕೆಲದಿನ ಸುಮ್ಮನೆ ಇರಿಸಿ ಕೊನೆಗೆ ಮೆಲ್ಲನೆ ಸಾಧುಮಾಡುವಂತೆ, ಕೆಲದಿನ ರಾಕ್ಷಸಿಯರ ಮೂಲಕ ಅವಳ ಮನಸ್ಸನ್ನು ತನ್ನ ಕಡೆಗೆ ಎಂತೂ ಸೆಳೆದುಕೊಳ್ಳುವೆನೆಂದು ಅವನು ಬಗೆದನು. ಅವಳನ್ನು ಸಾಮ್ರಾಜ್ಞಿಯಂತೆ

ಧಾರಾಳವಾಗಿ ಉಪಚರಿಸಿದರು. ಅವಳು ಮಾತ್ರ ಒಂದನ್ನೂ ಒಲ್ಲದೆ, ಪ್ರತಿ ಉಸಿರಿಗೂ 'ಹಾ, ರಾಮ! ಹಾ, ರಾಮ!' ಎಂದು ಧ್ಯಾನ ಮಾಡುತ್ತಲೇ ಇದ್ದಳು.

ನಂದಿಗ್ರಾಮದಲ್ಲಿ ಭರತನು ಸನ್ಯಾಸವನ್ನು ವಹಿಸಿಕೊಂಡು ರಾಜ ಪ್ರತಿನಿಧಿಯಾಗಿ, ಒಂದು ಕೈಯಿಂದ ಅಪ್ಪಣೆಕೊಡುತ್ತಲೂ ಮತ್ತೊಂದು ಕೈಯಿಂದ ಜಪಮಾಲೆಯ ಮಣಿಗಳನ್ನು ಎಣಿಸುತ್ತಲೂ, 'ಸೀತಾ-ರಾಮ' 'ಸೀತಾ-ರಾಮ' ಎನ್ನುತ್ತ, ಆ ಹದಿನಾಲ್ಕು ವರ್ಷಗಳ ಅವಧಿಯು ಎಂದಿಗೆ ಕೊನೆಗಾಣುವುದೊ ಎಂದೇ ಹಂಬಲಿಸಿ, ಕಾದು ಇದ್ದನು.



# ೪. ಕಿಷ್ಕಿಂಧಾಕಾಂಡ

ಇದಿರಿಗೆ ಕಾಣುತಿದ್ದ ಋಷ್ಯಮೂಕ ಪರ್ವತದಲ್ಲಿ ಕಪಿಧ್ವಜರಾದ ವಾನರ ರೆಷ್ಟೊ ಮಂದಿ ಕುಳಿತುಕೊಂಡು, ನಾನಾ ಮಾತುಕಥೆ ಬೆಳೆಸುತಿದ್ದರು. ವಾನರವೀರರು ಕೆಲವು ಚಿಕ್ಕ ಚಿನ್ನದ ಆಭರಣಗಳನ್ನು ತೋರಿಸಿ, ಪರಾಂಬರಿಸಿ, 'ಅವೆಲ್ಲಿಯವು?' ಎನ್ನುತಿದ್ದರು. ಅಂತಹವನ್ನು ಅವರೆಂದೂ ಮೊದಲು ನೋಡಿರಲಿಲ್ಲ.

ಸುಗ್ರೀವನೆ ಅವರಿಗೆ ನಾಯಕನು. ಸುಗ್ರೀವನು ಸಭೆಗೆ ಬಂದು ದನ್ನು ದೂರದಿಂದ ರಾಮಲಕ್ಷ್ಮಣರೂ, ಇಬ್ಬರು ಮನುಷ್ಯರು ಬಂದುದನ್ನು ಸುಗ್ರೀವನೂ, ಒಂದೇ ಕಾಲದಲ್ಲಿ ನೋಡಿದರು. ತಮಗೆ ಬೇಕಾದ ಸುಗ್ರೀ ವನೆ ಇದಿರಾಗಿದ್ದರೂ, ಇವರಿಗೆ ಅವನ ಪರಿಚಯ ತಿಳಿಯಲಿಲ್ಲ; ಇವರು ಯಾರೆಂದು ಅವನಿಗೆ ತಿಳಿಯಲಿಲ್ಲ. ಇವರನ್ನು ಕಂಡು ಅವನು ಬೆದರಿದನು. ಧನುರ್ಧಾರಿಯರಾದ ಇಬ್ಬರು ವೀರ ರಾಜಪುತ್ರರು ತನ್ನ ಕಡೆಗೆ ಏತಕ್ಕೆ ತಾನೆ ಬರುವರು? ಅವರ ಆಕಾರ, ರಾಜಲಕ್ಷಣ, ವೀರಲಕ್ಷಣ ಮೊದ ಲಾದುವನ್ನು ಕಂಡು, ಸುಗ್ರೀವನು ಇವರಾರೆಂದು ತಿಳಿದು ಬರಲು, ಅಂಜನಾದೇವಿಗೆ ಮಗನಾದ ಹನುಮಂತನನ್ನು ಕಳುಹಿದನು. ಹನು ಮಂತನು ಬುದ್ಧಿಶಾಲಿ, ವಿವೇಕಿ. ಅವನು ಬ್ರಾಹ್ಮಣವಟುವಿನಂತೆ ಇವರನ್ನು

ಕಂಡು ಉಪಚರಿಸಿ, ಇವರು ಯಾರು ಏತಕ್ಕೆ ಅತ್ತ ಬಂದವರು ಎಂಬು ದನ್ನೆಲ್ಲ ತಿಳಿದುಕೊಂಡನು. ಇವರಲ್ಲೂ ಹನುಮಂತನ ವಿಷಯವಾಗಿ ಕುತೂಹಲ ಉಂಟಾಯಿತು. ಇವರಿಗೆ ಅವನು ತನ್ನ ಮತ್ತೆಲ್ಲ ವಾನರ ಮುಖ್ಯರ ಪರಿಚಯ ಮಾಡಿಕೊಡಲು ಒಪ್ಪಿದನು. ಸುಗ್ರೀವರಾಜನಿಂದ ಇವರ ಉದ್ದೇಶವು ನೆರವೇರಬೇಕಾಗಿರುವ ಇವರ ಅಭಿಪ್ರಾಯುವನ್ನು ಹನುಮನು ಹಿಂತಿರುಗಿ ರಾಜನಿಗೆ ತಿಳಿಸಲು,—ಮೆಲ್ಲಮೆಲ್ಲನೆ ಸುಗ್ರೀವನು ಅವರಿದ್ದ ಕಡೆಗೇ ನಡೆದು, ವಿನಯುದಿಂದ ಅವರನ್ನು ವಂದಿಸಿ ತನ್ನಲ್ಲಿಗೆ ತನ್ನೊಡನೆ ಕರೆದುಕೊಂಡು ಮರಳಿದನು. ಆಸನಗಳಲ್ಲಿ ಇವರನ್ನು ಕುಳ್ಳಿರಿಸಿ ಯೋಗಕ್ಷೇಮುವನ್ನು ವಿಚಾರಿಸಿದನು. ರಾಮನು ತನ್ನ ವೃತ್ತಾಂತ ವನ್ನೆಲ್ಲ ತಿಳುಹಲು, 'ರಘುನಂದನನೆ! ನಿಮ್ಮ ದರ್ಶನಲಾಭದಿಂದ ನಾನು ಎಂದೂ ಕಾಣದ ಸುಖವನ್ನು ಇಂದು ಅನುಭವಿಸಿದಂತಾಗಿದೆ. ನಿಮ್ಮಿಂದಲೆ ನನ್ನ ದುಃಖವೂ ನಿವಾರಣೆಯಾಗುವುದೆಂದು ನಾನು ನಂಬಿರುವೆನು. ನೀವು ಹೇಗೆ ಸತೀವಿಯೋಗದಿಂದ ಶೋಕವನ್ನು ಅನುಭವಿಸುತ್ತಿರುವಿರೊ, ಅದರಂತೆ ನಾನೂ ಪತ್ನೀವಿಯೋಗದಿಂದ ಬೆಂದಿರುವೆನು. ನಮ್ಮಿಬ್ಬರ ಮನೋವ್ಯಾಕುಲವು ಒಂದೇ ಪ್ರಕಾರದ್ದಾಗಿದೆ. ನಮ್ಮಣ್ಣನಾದ ವಾಲಿ ಎಂಬವನು ಅಸಾಮಾನ್ಯವಾದ ಬಾಹುಬಲವುಳ್ಳ ಪರಾಕ್ರಮಶಾಲಿಯು. ಆತನು ನನ್ನನ್ನು ರಾಜ್ಯದಿಂದ ಹೊರಕ್ಕೋಡಿಸಿರುವನು; ನನ್ನ ಪತ್ನಿಯನ್ನು ಬಲಪೂರ್ವಕವಾಗಿ ಸೆಳೆದೊಯ್ದು ತನ್ನ ಅಂತಃಪುರದಲ್ಲಿ ಇರಿಸಿರುವನು!' ಎಂದು ತಲೆಬಾಗಿ ಕಣ್ಣೀರು ಮಿಡಿದನು.

ಅಣ್ಣತಮ್ಮಂದಿರೊಳಗೆ ಹಗೆತನವೆಂಬುದು ಎಂದೂ ಇರಬಹುದಾಗಿ ರಾಮನು ಎಣಿಸಿರಲಿಲ್ಲ. ಅದು ಅಸ್ವಾಭಾವಿಕವು. ಅದಕ್ಕಾಗಿ 'ನಿಮ್ಮ ಅಣ್ಣನಿಗೂ ನಿನಗೂ ಈ ರೀತಿಯಾಗಿ ಹಗೆ ಏತರಿಂದ ಉಂಟಾಯಿತು?' ಎಂದು ಕೇಳಿದನು. ಅದಕ್ಕಾಸುಗ್ರೀವನು—'ಮಹಾಶಯ! ನಮ್ಮ ತಂದೆಯು ದಿವಂಗತನಾದ ಬಳಿಕ, ನಮ್ಮ ಅಣ್ಣನಾದ ವಾಲಿಯೇ ರಾಜ್ಯಾಧಿಕಾರಿ ಯಾದನು. ನಾನು ಆಳಿನಂತೆ ಅವನ ಸೇವೆಯನ್ನು ಮಾಡುತ್ತ ತೃಪ್ತಿ ಹೊಂದಿದ್ದೆನು. ಇಂತಿರಲು, ಒಂದು ದಿನ, ಮಾಯಾವಿಯಾದ ದಾನವ ನೊಬ್ಬನು ಕಿಷ್ಕಿಂಧೆಗೆ ಬಂದು, ಅವನೊಡನೆ ಯುದ್ಧವನ್ನಾರಂಭಿಸಿದನು.

ಅಣ್ಣನೊಡನೆ ನಾನೂ ಯುದ್ಧಕ್ಕೆ ಹೊರಟುದನ್ನು ನೋಡಿ ಆ ಮಾಯಾವಿಯು ಬೆದರಿ ಒಂದು ಗುಹೆಯನ್ನು ಹೊಕ್ಕನು. ಅಣ್ಣನು ಅವನ ಹಿಂದೆಯೆ ಆ ಗುಹೆಯನ್ನು ನುಗ್ಗಿ, ತಾನು ಬರುವ ವರೆಗೆ ನಾನು ಆ ಗುಹೆಯ ಬಾಗಿಲಲ್ಲೆ ಇರಬೇಕಾಗಿ ಅಪ್ಪಣೆಕೊಟ್ಟು, ಮಾಯಾವಿಯನ್ನು ಹಿಂಬಾಲಿಸಿದನು. ಎಷ್ಟು ದಿನಗಳಾದರೂ ಅಣ್ಣನು ಮರಳಲಿಲ್ಲ; ಅವನು ಮಡಿದಿರುವನೆಂದು ನಾನು ನಂಬಿ, ಆ ದಾನವನು ಇನ್ನೆಲ್ಲಿ ಹೊರಕ್ಕೆ ಬಂದು ನಮ್ಮನ್ನು ಪೀಡಿಸುವನೊ ಎಂದು ಭಯಪಟ್ಟು, ಆ ಗುಹಾದ್ವಾರವನ್ನು ದೊಡ್ಡದೊಂದು ಬಂಡೆಕಲ್ಲಿನಿಂದ ಮುಚ್ಚಿಟ್ಟೆನು. ನಾನು ಈ ಊರಿಗೆ ಮರಳಲು, ಮಂತ್ರಿಗಳೂ ಪ್ರಜೆಗಳೂ ನನ್ನನ್ನೆ ಅರಸೆಂದು ಅಭಿಷೇಕವನ್ನು ಮಾಡಿದರು. ಅಂದಿನಿಂದ ನಾನೇ ರಾಜ್ಯವನ್ನಾಳುತಿದ್ದೆನು. ಅನೇಕ ದಿನಗಳು ಕಳೆದ ಬಳಿಕ, ಅಣ್ಣನು ಗುಹೆಯ ಹೊರಕ್ಕೆ ಬರಲು ಯತ್ನಿಸಿದನು. ಅಡ್ಡವಾಗಿ ಬಂಡೆಯು ಇದ್ದುದನ್ನು ಕಂಡು, ಬೇರೆಯೆಣಿಸಿ, ಅದನ್ನು ಅವನು ಕಿತ್ತು ಬಿಸುಟು, ಊರಿಗೆ ಬಂದನು. ನಾನು ಅವನ ಕಾಲು ಹಿಡಿದು ಬೇಡಿಕೊಂಡು ಎಲ್ಲವನ್ನೂ ಅರಿಕೆಮಾಡಿಕೊಂಡೆನಾದರೂ, ಅವನು ಒಂದನ್ನೂ ನಂಬದೆ, ನಾನು ರಾಜ್ಯಾಭಿಲಾಷೆಯಿಂದ ಹಾಗೆ ಮಾಡಿದ್ದೆನೆಂದು ಭಾವಿಸಿ, ನನ್ನನ್ನು ಕೊಲ್ಲಲು ಬಗೆದನು. ಆಗ ನಾನು ಪ್ರಾಣಭಯದಿಂದ ಈ ಪರ್ವತಕ್ಕೆ ಪರಿಜನರೊಡನೆ ಓಡಿ ಬಂದೆನು. ಅವನು ಮತಂಗಮುನಿಗೆ ಭಯಪಡುವನಾದುದರಿಂದ ಇಲ್ಲಿ ನಾನು ಸುರಕ್ಷಿತವಾಗಿರುವೆನು. ವಾಲಿಯು ದುಂದುಭಿ ಎಂಬೊಬ್ಬ ರಾಕ್ಷಸನನ್ನು ಕೊಂದಾಗ, ಅವನ ಶವವನ್ನು ಅಲ್ಲಿಂದ ಈ ಬೆಟ್ಟದ ತನಕವೂ ಎಳೆದು ತರಲು, ದಾರಿಯಲ್ಲಿ ಮತಂಗಋಷಿಯ ಆಶ್ರಮದಲ್ಲೆಲ್ಲ ಆ ಹೆಣದ ಗಾಯಗಳಿಂದ ನೆತ್ತರು ಬಳಿದಂತಾಯಿತು. ತನ್ನ ಆಶ್ರಮವು ವಾಲಿಯ ದೆಸೆಯಿಂದ ಮಲಿನವಾಯಿತೆಂದು ಋಷಿಯು ಅವನ ಮೇಲೆ ಕೆರಳಿರುವನು. ಅದನ್ನು ತಿಳಿದು ಇಲ್ಲಿಗೆ ಅವನು ಬರುವಂತಿಲ್ಲ. ಇಷ್ಟೇ ನನ್ನ ದುಃಖ ಕಾಹಿನಿಯು. ಇನ್ನೆಂದಿಗೆ ನಾನು ನಿರ್ಭಯವಾಗಿರಬಹುದೊ, ಎಂದಿಗೆ ನನ್ನ ಸತಿಯನ್ನು ನಾನು ಮರಳಿ ಪಡೆವೆನೊ, ತಿಳಿಯದು. ನಿಮ್ಮ ಸಹಾಯವಾದರೆ ಎಲ್ಲವೂ ಸಾಧ್ಯವಾಗಬಹುದು!' ಎಂದು ಬಿನ್ನವಿಸಿದನು.

ತನ್ನ ಸ್ಥಿತಿಯನ್ನೂ ಸುಗ್ರೀವನ ಸ್ಥಿತಿಯನ್ನೂ ಹೋಲಿಸಿಕೊಂಡು, ರಾಮನು, 'ಯಾವನು ಸ್ತ್ರೀಯರ ಧರ್ಮದ ಮೇಲೆ ಅತ್ಯಾಚಾರವನ್ನು ಮಾಡುವನೊ ಅಂತಹನನ್ನು ಮುರಿದಿಕ್ಕುವುದೇ ನನ್ನ ಧರ್ಮವು. ಅದಕ್ಕಾಗಿಯೆ ನಾನು ವಾಲಿಯನ್ನು ಕೊಂದಿಕ್ಕುವೆನು. ನೀನೆ ನಿಶ್ಚಿಂತನಾಗಿ ಕಿಷ್ಕಿಂಧಾಧಿಪತಿಯಾಗುವಂತೆ ಮಾಡುವೆನು' ಎಂದು ಭರವಸೆಕೊಟ್ಟನು. ಆಗ ಸುಗ್ರೀವನು ಕೃತಜ್ಞತೆಯಿಂದ ತಲೆಬಾಗಿ, 'ನಾನು ಈ ಜನ್ಮವೆಲ್ಲ ನಿಮಗೆ ದಾಸನಾಗುವೆನು; ನಿಮ್ಮ ಆಜ್ಞೆಯನ್ನು ಪಾಲಿಸುವುದೆ ನನ್ನ ಧರ್ಮವು' ಎಂದನು. ಇದಾದ ಬಳಿಕ ಇಬ್ಬರೂ ಅಗ್ನಿಸಾಕ್ಷಿಯಾಗಿ ತಮ್ಮ ಮಿತ್ರತ್ವದ ಪ್ರಮಾಣಮಾಡಿಕೊಂಡರು. ಆರ್ಯ ರಾಮನು ಈ ರೀತಿಯಾಗಿ ವಾನರರೊಡನೆ ತಾನಾಗಿ ಮಿತ್ರತ್ವವನ್ನು ಗಳಿಸಿಕೊಂಡ ಉದಾರ ಗುಣವನ್ನು ವಿವೇಕವುಳ್ಳ ಹನುಮಂತನು ಕಂಡು, ಆಗಲೆ ತಾನು ರಾಮದಾಸನಾದೆನೆಂದು ರಾಮನ ಕಾಲಿಗೆರಗಿ, ಅವನ ಬಳಿಯಲ್ಲೆ ಇರುವವನಾದನು.

ಸುಗ್ರೀವನು ಇನ್ನು ವಾಲಿಯನ್ನು ಯುದ್ಧಕ್ಕೆ ಕರೆಯುವುದೆಂದಾಯಿತು. ಅವರಿಬ್ಬರೂ ಕಾದಾಡುವಾಗ, ರಾಮನು ದೂರದಿಂದ ಬಾಣವನ್ನು ಬಿಟ್ಟು ವಾಲಿಯನ್ನು ಕೊಲ್ಲುವುದೆಂದೂ ನಿಶ್ಚಯವಾಯಿತು. ಆದರೆ ರಾಮನ ಸಾಹಸವನ್ನು ಸುಗ್ರೀವನು ಅದು ವರೆಗೆ ಕಂಡವನಲ್ಲ; ವಾಲಿಯ ಪರಾಕ್ರಮವನ್ನು ಅವನು ಚೆನ್ನಾಗಿ ಬಲ್ಲನು; ಎಷ್ಟೋ ಸಲ ಅವನೊಡನೆ ಕಾದಾಡಿ ಮೈಮುರಿದುಕೊಂಡವನಷ್ಟೆ. ವಾಲಿಯನ್ನು ಯುದ್ಧಕ್ಕೆ ತಾನಾಗಿ ಕರೆಯಲು ಒಪ್ಪುವನೇ? ಹೀಗೆಂದು ಸಮಯ ಹಾಳುಮಾಡಲಾಗುವುದೆ? ರಾಮನು ಅಲ್ಲಿದ್ದ ಏಳು ತಾಲವೃಕ್ಷಗಳನ್ನು ತನ್ನ ಬಾಣಗಳಿಂದಲೆ ಕಡಿದು, ತನ್ನ ಪರಾಕ್ರಮವನ್ನು ಸುಗ್ರೀವನಿಗೆ ತೋರಿಸಿ ಕೊಟ್ಟನು. ಬಳಿಕ ವಾಲಿಯೂ ಸುಗ್ರೀವನೂ ಒಂದೇ ಆಕೃತಿಯವರೆಂದು ತಿಳಿದು, ವಾಲಿಗೆಂದ ಬಾಣವು ಸುಗ್ರೀವನನ್ನು ಕೊಲ್ಲದಂತೆ, ಸುಗ್ರೀವನನ್ನು ಬೇರೆ ಹೂಮಾಲೆಯಿಂದ ಗುರುತಿಸಿಕೊಂಡು ಯುದ್ಧವಾಗಲೆಂದನು.

ರಾಜದ್ವಾರದಲ್ಲಿ ನಿಂತು, ಸುಗ್ರೀವನು ಆರ್ಭಟೆಯಿಂದ ವಾಲಿಯನ್ನು ಕರೆಯಲು, ಅವನು ಯುದ್ಧಕ್ಕೆ ಸಿದ್ಧನಾದನು. ಆಗ ಬುದ್ಧಿವಂತೆಯಾದ

ತಾರೆಯು, ಪತಿಯನ್ನು ಕುರಿತು,—'ಸುಗ್ರೀವನಲ್ಲಿಗೆ ರಾಮಲಕ್ಷ್ಮಣರೆಂಬ ಸಾಹಸಿಗಳು ಬಂದಿರುವರೆಂದು ನಾನು ಅಂಗದನಿಂದ ಈಗಲೆ ಕೇಳಿರುವೆನು. ಅವರು ಸುಗ್ರೀವನೊಡನೆ ಸಖ್ಯವನ್ನು ಬೆಳಸಿರುವರು. ಇಷ್ಟರಲ್ಲೆ ಪಲಾಯನ ಮಾಡಿದ ಸುಗ್ರೀವನು ಪುನಃ ಯುದ್ಧಕ್ಕೆ ಬಂದನೆಂದರೇನು? ಅವನಿಗೆ ಜಯವು ನಿಶ್ಚಿತವಾಗಿದೆ. ಅದು ಕಾರಣ ಸುಗ್ರೀವನೊಡನೆ ಸಂಧಿಯಾದರೆ ಉತ್ತಮವಲ್ಲವೆ? ಹಾಗಾಗಲೆಂದು ಬೇಡುವೆನು' ಎಂದು ಕಾಲಿಗೆರಗಿ ನುಡಿದಳು. ವಾಲಿಯು ಮಾತ್ರ ಇದನ್ನೊಪ್ಪಿಕೊಳ್ಳದೆ, ಸುಗ್ರೀವನೊಡನೆ ಯುದ್ಧವನ್ನೆ ಮಾಡಿದನು. ಯುದ್ಧವು ಬಲವಾಗಿ ನಡೆವುದರೊಳಗಾಗಿಯೆ, ಬಾಣವೊಂದು ವನಮಧ್ಯದಿಂದ ಬಂದು ವಾಲಿಯನ್ನು ಗಾಯಪಡಿಸಿ ಅವನನ್ನು ಕೆಡೆಬೀಳಿಸಿತು. ಅವನು ಚೀತ್ಕರಿಸಿದನು. ತಾರೆಯ ಮಾತು ನಿಜವಾದುದೆಂದು ಅವನು ಆಗ ತಿಳಿದನು. ಇನ್ನಷ್ಟರೊಳಗೆ ರಾಮನೂ ಅತ್ತ ಬಂದನು. 'ನಿನ್ನ ವಿಷಯವಾಗಿ ನಾನು ಮೊದಲೇ ತಿಳಿದಿದ್ದೆನು. ಆದರೆ ಕ್ಷತ್ರಿಯವೀರನಾದ ನೀನು ಹೀಗೆ ಮರೆಯಲ್ಲಿಂದ ಬಾಣವನ್ನು ಹೂಡಿ, ನನ್ನನ್ನು ಕೊಲ್ಲುವೆಯೆಂದು ನಾನು ಭಾವಿಸಿರಲಿಲ್ಲ. ಆದರೆ ಎಂತಹ ವೀರಧರ್ಮವನ್ನು ಮೆರೆಯಿಸಿದೆ! ನನ್ನನ್ನು ಕೊಲ್ಲಿಸಲು ನಿನ್ನನ್ನು ಜತೆಗೆ ಕರೆತಂದ ನನ್ನ ತಮ್ಮನಾಣೆ! ತನ್ನ ಕೈವಿಡಿದ ಅಬಲೆಯನ್ನು ಕಾಪಾಡಲಾರದೆ ಕಳೆದುಕೊಂಡು ಇತ್ತ ಬಂದಿರುವ ವೀರನೆ! ಅರಸುಗಳು ಬೇಟೆಯಾಡುವರಾದರೂ ಮೃಗಮಾಂಸವನ್ನುಣ್ಣುವರಾದರೂ ವಾನರ ಮಾಂಸಕ್ಕಾಗಿ ಜೊಲ್ಲು ಸುರಿಸುವ ರಾಜರನ್ನು ನಾನು ಕಂಡುದಿಲ್ಲ. ತಾನೂ ವೀರನು, ಇವನ ವೀರತ್ವವನ್ನು ನೋಡೋಣವೆಂದು ಪಂತಕ್ಕಾಗಿ ಬಂದೆಯಾದರೆ, ಧರ್ಮಯುದ್ಧಪ್ರಕಾರವಾಗಿ ಸಮ್ಮುಖವಾಗಿರದೆ, ತಲೆಮರೆಸಿ ಬಾಣಬಿಟ್ಟುದೇಕೆ! ನಾನು ನಿನ್ನನ್ನು ಕೆಣಕಿದವನೇ ಅಲ್ಲ. ನೀನು ಸೂರ್ಯವಂಶದಲ್ಲಿ ಹುಟ್ಟಿದ ಯಾವ ಅರಸುಗಳ ಸಲ್ಲಕ್ಷಣಗಳನ್ನೂ ಉಳ್ಳವನಲ್ಲವಲ್ಲ! ತಾನು ದಶರಥನ ಮಗನೆಂದುಕೊಳುವೆ ಏತಕ್ಕೆ? ನೋಡಿದರೆ, ಸನ್ಯಾಸಿವೇಷವನ್ನು ಧರಿಸಿಕೊಂಡಿರುವೆ; ಈ ನಿನ್ನ ವೇಷವಾದರೂ, ನೀನು ಕುಲಕಲಂಕತೆಯನ್ನು ಸೂಚಿಸುವಂತೆ, ಕಪಟವೇಷವಲ್ಲವಷ್ಟೆ! ಹೆಸರು ರಾಮನೆಂದಾದರೂ, ನಡತೆಯು ರಮಣೀಯವಲ್ಲ; ನಿನಗೆ ಇಂತಹ ತಪ್ಪು

ಹೆಸರನ್ನಿಟ್ಟ ಅವರಾರು? ಸುಗ್ರೀವನು ನಿನಗೆ ಗೆಳೆಯನಾಗುವುದು ಹೆಚ್ಚಿನ ದಲ್ಲ; ಇಬ್ಬರೂ ತಮ್ಮ ಹೆಂಡಿರನ್ನು ಕಾಪಾಡಲಾರದವರು; ಆದರೆ ರಾವಣ ನನ್ನು ದಂಡಿಸಬೇಕೆಂದು ಈ ಮಿತ್ರತ್ವವೆ? ನನಗೆ ತಿಳಿಸಿದ್ದರೆ, ಹಿಂದೆ ನನ್ನ ಬಾಲಕ್ಕೆ ತೂಗಿಸಿ ಬಿಗಿದುತಂದ ಆ ರಾವಣನನ್ನು, ನೀನು ನಿನ್ನ ಕಥೆ ತಿಳಿಸಿ ಮುಗಿಸುವುದರೊಳಗೆ ನಾನಿತ್ತ ತಂದೊಪ್ಪಿಸುತಿರಲಿಲ್ಲವೆ! ನನ್ನನ್ನು ಕೊಲ್ಲು ವೆಯೇಕೆ? ರವಿಕುಲದ ವೀರನಾದರೆ ಉತ್ತರಕೊಡು." ಎಂದು ಮೂರ್ಛಿ ತನಾಗುವ ವಾಲಿಯು ಅವನನ್ನು ಮೂದಲಿಸಿದನು.

ರಾಮನು 'ವಾನರವೀರನೆ! ಧರ್ಮತತ್ವವನ್ನು ನೀನಷ್ಟು ಚೆನ್ನಾಗಿ ತಿಳಿದಿರುವೆಯಂತೆ! ಬಾಹುಬಲದಿಂದ ಮದಾಂಧನಾಗಿ, ನಿರ್ದೋಷಿಯಾದ ತಮ್ಮನನ್ನು ಊರಹೊರಗಟ್ಟಿ, ಅವನ ಧರ್ಮಪತ್ನಿಯನ್ನು ಬಲಪೂರ್ವಕ ವಾಗಿ ನಿನ್ನ ಅಂತಃಪುರದಲ್ಲಿ ಸೆರೆಯಿಟ್ಟಿರುವೆ. ನಿನ್ನಂತಹ ಮಹಾ ಪಾಪಿಗಳು ಇಷ್ಟು ದಿನ ಬದುಕಿದ್ದುದೇ ಅನ್ಯಾಯವು. ನಿನ್ನಂತಹರೊಡನೆ ಧರ್ಮ ಯುದ್ಧವೆ, ಸಮರಂಗವೆ? ದುಷ್ಟರನ್ನು ಕೊಲ್ಲುವುದೇ ಕ್ಷತ್ರಿಯ ರಾದ ನಮ್ಮ ಧರ್ಮವು. ದುಷ್ಟಪಶುಗಳನ್ನು ಕೊಲ್ಲಬೇಕಾದರೆ, ಅವುಗಳನ್ನು ಯುದ್ಧಕ್ಕೆ ಬನ್ನಿರೆಂದು ಕರೆದು ಸಮರಂಗದಲ್ಲಿ ನಿಂದು ಕೊಲ್ಲುವುದುಂಟೇ? ನೀನು ಮಾಡಿದ ಪಾಪವು ನಿನ್ನನ್ನು ಪಶುವೆಂದೇ ಮಾಡಿಟ್ಟಿರುವಾಗ, ಪಶುವನ್ನು ಕೊಲ್ಲುವಂತೆ ನಿನ್ನನ್ನು ಕೊಂದಿರುವೆನು. ನಿನ್ನ ಪಾಪವೆ ನಿನ್ನನ್ನು ಕೊಂದಿತಲ್ಲದೆ, ನಾನು ನಿನ್ನ ಇಂತಹ ಮರಣಕ್ಕೆ ಕಾರಣನಲ್ಲ' ಎಂದು ಹೇಳಲು, ವಾಲಿಯು ಒಂದೂ ಉತ್ತರವಿಲ್ಲದೆ ರಾಮವಾಕ್ಯಗಳಿಗೆ ಸೋತು, ವಿವೇಕಕ್ಕೆ ಸೋತು, ತಾನು ಮಾಡಿದ ಪಾಪಕ್ಕೆ ಪಶ್ಚಾತ್ತಾಪ ಗೊಂಡನು. ಶ್ರೀರಾಮನನ್ನು ಮೂದಲಿಸಿದುದಕ್ಕೆ ಕ್ಷಮೆಬೇಡಿಕೊಂಡನು. ತಮ್ಮನನ್ನು ಕರೆದು ತಾನು ಆತನಿಗೆ ಮಾಡಿದ ವಿರೋಧ ಅಪರಾಧಗಳನ್ನು ಮರೆಯಬೇಕೆಂದನು. ಅಂಗದನಿಗೆ ಆಶ್ರಯ ಕೊಡಬೇಕಾಗಿಯೂ, ತಾರೆಯನ್ನು ಪರಿಗ್ರಹಿಸಬೇಕಾಗಿಯೂ ಸುಗ್ರೀವನೊಪ್ಪುವಂತೆ ಶ್ರೀರಾಮನು ಬೋಧಿಸಬೇಕೆಂದು ಪ್ರಾರ್ಥಿಸುತ್ತ ವಾಲಿಯು ಪ್ರಾಣ ಬಿಟ್ಟನು. ವಾಲಿಯ ಬಂಧುಬಳಗದವರೆಲ್ಲರ ದುಃಖವನ್ನು ರಾಮನು ಶಾಂತಗೊಳಿಸಿದನು. ಸುಗ್ರೀವನೂ ಅತ್ತುಕೊಂಡನು. 'ಇದು ಅತ್ತುಕೊಳ್ಳುವ ಸಮಯವಲ್ಲ.

ಯಥಾವಿಧಿಯಾಗಿ ವಾಲಿಗೆ ಅಗ್ನಿ ಸಂಸ್ಕಾರವನ್ನು ಮಾಡುವನಾಗು. ಮುಂದೆ, ನೀನೆ ರಾಜನಾಗಿ ಕಿಷ್ಕಿಂಧೆಯಲ್ಲಿ ರಾಜ್ಯಭಾರವನ್ನು ನಡೆಸು. ವಾಲೀಪುತ್ರನಾದ ಅಂಗದನೆ ಯುವರಾಜನಾಗಲಿ!' ಎಂದು ರಾಮನು ಸುಗ್ರೀವನಿಗೆ ಆಜ್ಞಾಪಿಸಿದನು.

ಸುಗ್ರೀವನು ರಾಮನ ಅಪ್ಪಣೆಯಂತೆ ಎಲ್ಲವನ್ನೂ ಮಾಡಿದನು. ಬಳಿಕ ಒಂದು ದಿನ, 'ಮಿತ್ರರೆ!, ಇನ್ನು ಮಳೆಗಾಲವು ಸಮಾಪಿಸಿರುವುದು. ಮಳೆಯ ದಿನಗಳು ಮುಗಿವಪರ್ಯಂತವೂ ನೀವು ಇಲ್ಲೇ ಇರತಕ್ಕುದಾಗಿದೆ. ನಾನು ಎಲ್ಲ ಪರ್ವತಗಳಲ್ಲೂ ವನಗಳಲ್ಲೂ ವಾಸಮಾಡಿರುವ ವಾನರರಿಗೂ ಭಲ್ಲೂಕರಿಗೂ ಈ ಪುರಕ್ಕೆ ಬರುವ ಹಾಗೆ ಕರೆಯಕಳುಹುವೆನು. ಅವರೆಲ್ಲರೂ ಇಲ್ಲಿಗೆ ಬರಲಿ!' ಅನಂತರ ಕೂಡಲೆ ಸೀತಾದೇವಿಯನ್ನು ರಾವಣನಿಂದ ತರುವುದಕ್ಕಾಗಿ ನಾವೆಲ್ಲರೂ ಹೊರಡುವೆವು.' ಎಂದು ಸುಗ್ರೀವನು ಹೇಳಿದನು. 'ನಾನು ತಂದೆಯ ಸತ್ಯವಾಕ್ಯವನ್ನು ಪರಿಪಾಲಿಸುವುದಕ್ಕಾಗಿ ವನವಾಸವನ್ನು ಮಾಡಲು ಬಂದೆನು. ಅದುಕಾರಣ ನಿನ್ನ ಈ ನಗರದಲ್ಲಿ ಇರಲಾರೆನು. ಆ ವನದಲ್ಲೆ ವಾಸಮಾಡುವೆನು. ಇವೇ ಕೆಲವು ತಿಂಗಳುಗಳಲ್ಲಿ ಸೀತೆಯನ್ನು ತರುವುದಕ್ಕಾಗಿ ಬೇಕಾಗಿರುವ ಎಲ್ಲ ಸನ್ನಾಹವನ್ನೂ ನೀನು ಸಿದ್ಧಗೊಳಿಸುವನಾಗು' ಎಂದು ರಾಮನೆನ್ನಲು, ಸುಗ್ರೀವನು ರಾಮವಾಕ್ಯವನ್ನು ಶಿರಸಾವಹಿಸಿಕೊಂಡು ತನ್ನ ರಾಜಧಾನಿಗೆ ತೆರಳಿದನು. ಸುಗ್ರೀವನ ಅಪ್ಪಣೆಯಂತೆ ವಾನರರೂ ಭಲ್ಲೂಕರೂ ದಿನೇ ದಿನೇ ಅಲ್ಲಿಗೆ ಬಂದು ನೆರೆಯಲಾರಂಭಿಸಿದರು.

ಅತ್ತ, ಸೀತೆ ಏನಾದಳು? ರಾವಣನ ಉದ್ಯಾನವನದಲ್ಲಿ, ಅಶೋಕವನದಲ್ಲಿ, ಸೀತೆಗೆ ಸೆರೆ. ಸುತ್ತಲೂ ರಾಕ್ಷಸಿಯರು ವಿವಿಧ ಉಪಚಾರಗಳನ್ನು ಮಾಡುತ್ತಿರುವರು. ಇವಳೊಂದನ್ನೂ ಮುಟ್ಟಳು. 'ರಾಮಾ, ರಾಮಾ' ಎನ್ನುತಿರುವಳು. ಮಂಡೋದರಿಯು ರಾವಣನ ಪತ್ನಿ. ಅವಳೇ ಸೀತೆಯ ಪರಿಚಾರಿಣಿಯಾಗಿರುವಳು. ರಾಕ್ಷಸಿಯರು ರಾವಣನ ಗುಣಾತಿಶಯಗಳನ್ನು ಹೊಗಳಿ, ಸೀತೆಯ ಮನಸ್ಸನ್ನು ಅವನ ಕಡೆಗೆ ಸೆಳೆಯಲು ಯತ್ನಿಸುತ್ತಿರುವರು. ಸೀತೆಯು ಸಿಟ್ಟಿನಿಂದಲೂ, ದುಃಖದಿಂದಲೂ 'ಈ

ಮಾತುಗಳನ್ನು ಕುಲವಧುಗಳು ಆಡಲಾಗದು. ಕುಲೀನಸ್ತ್ರೀಯರ ಮಾತು ಗಳೇ ಇವು ? ವಂಶವೇ ಹಾಳಾಗುವ ಇಂತಹ ಮಾತುಗಳನ್ನು ಆಡಿ, ನಿಂದೆಗೂ ಪಾಪಕ್ಕೂ ಒಳಗಾಗದಿರಿ. ಶ್ರೀ ರಾಮಚಂದ್ರನೆ ನನ್ನ ಹೃದಯ ದಲ್ಲಿ ಆರಾಮಗೊಂಡಿರುವಾಗ, ಸುಮ್ಮನೆ ತಂದೆಯಂತೆಯೂ ಅಥವಾ ಸೋದರನಂತೆಯೂ ಇರುವ ಇತರ ಯಾವ ಪುರುಷನ ಮಾತನ್ನೂ ನನ್ನೊಡನೆ ಎತ್ತದಿರಿ.

**ತನಗೆ ಪತಿವ್ರತಮಿಲ್ಲದ**
**ವನಿತೆ ಕುಲಸ್ತ್ರೀಯೆ ? ಭಿನ್ನಭಜನೆ. ಇಂತ।**
**ಪ್ಪನುಚಿತವಂ ಹರಿವಂಶದ**
**ವನಿತೆಯೊಳ್ ನುಡಿಯಲಕ್ಕುಮೇ ನಿಮ್ಮನ್ನರ್ ?॥**

ಎಂದು ಅವರಿಗೆ ಬುದ್ಧಿ ಹೇಳುತಲಿರುವಳು. ರಾವಣನೇ ದಿವ್ಯಾಲಂಕಾರ ಗಳನಿಟ್ಟು ಅವಳಿಗೆ ಭವ್ಯವಾದ ಬಹುಮಾನಗಳನ್ನು ತಂದೊಪ್ಪಿಸುತಿರುವನು.

'ಪಾದಗಳಿಗೆ ನೂಪುರ, ಸೊಂಟಕ್ಕೆ ರತ್ನಖಚಿತವಾದ ಮೇಖಲೆಯು, ತೋಳಿಗೆ ಪಟ್ಟೆಯ ಕಡಗ, ಕಪೋಲಗಳಿಗೆ ಪತ್ರಲೇಖೆ ಇಷ್ಟನ್ನೂ ನಿನಗೆ ಬಹುಮಾನವಾಗಿ ಕೊಡುವೆನು. ಆನೆಯ ಮೇಲೆ ಬೆಳ್ಗೊಡೆಯ ನೆರಳಲ್ಲಿ ಹಿಂದೆ ನೀನಿದ್ದವಳು, ಅಂತಃಪುರದಲ್ಲಿ ವಿಲಾಸಿನಿಯರ ನಡುವೆ ನೀನಿದ್ದವಳು, ಇಲ್ಲಿಯೂ ಅದೇ ವೈಭವ ತಳೆದು ನನ್ನ ಉದ್ಯಾನಗಳಲ್ಲಿ ನೀನು ಮೆರೆಯ ಬಹುದಲ್ಲವೇ ? ಮಹಾ ನದಿಗಳನ್ನೂ ಕುಲಾದ್ರಿಗಳನ್ನೂ ದಿವ್ಯ ಸರೋವರ ಗಳನ್ನೂ ನೀನು ನನ್ನ ಪುಷ್ಪಕವಿಮಾನವನ್ನೇರಿ ಅಡ್ಡಾಡಿ ವಿಹರಿಸಬಹು ದಲ್ಲವೆ ? ಕಾಡುಗಳಲ್ಲಿ ಒಂದೂ ಸುಖವಿಲ್ಲದೆ ಎಲ್ಲಿಂದೆತ್ತಲೋ ಸಂಚರಿಸಿ ಆ ರಾಮನೊಡನೆ ನೀನು ವಿರಾಮಹೊಂದುವುದುಂಟೆ ? ಕ್ರೀಡಾಮಂದಿರ ಗಳಲ್ಲಿದ್ದು ಸೌಖ್ಯವನ್ನು ಅನುಭವಿಸಬಾರದೆ ?' ಎಂದು ನೂರಾರು ವಿಧವಾಗಿ ಅವಳನ್ನು ಮಾತಾಡಿಸಿದನು. ಆದರೆ ಆಕಾಶಕ್ಕೆ ಬಣ್ಣ ಬಳಿದವರುಂಟೆ ? ಸೀತೆಯು ಅತಿಯಾಗಿ ಸಿಟ್ಟಾದಳಾದರೂ ಮೊಗದಲ್ಲಿ ಸಿಡುಕನ್ನು ತೋರಿಸಿ ಕೊಳ್ಳದೆ—

"ಗುಣಹಾನಿಯಿಂದಧೋಗತಿ
ಗುಣದಿಂ ಸ್ವರ್ಗಾಪವರ್ಗ ಸುಖಮುಕ್ಕುಮೆನಲ್।
ಗುಣಹೀನರ ಸಿರಿಯಿಂದಂ
ಗುಣಿಗಳ ಬಡತನಮೆ ನಾಡೆಯುಂ ಲೇಸಲ್ತೇ ?॥

ನುಡಿಯಲ್ತಕ್ಕುದೆ ಪಾಳಿದಪ್ಪಿ ಪಳಿಗಂ ಪಾಪಕ್ಕಮುಳ್ಕಳ್ಕದೀ
ನುಡಿಯಂ? ಛೀ! ಪರದಾರ, ವನ್ಯಶಯನಸ್ಥಾನಂ, ಪೆರಮ್ಗಿಂದ ನೀರ್
ಮುಡಿದುತ್ಫುಲ್ಲಕದಂಬಂಕಂ, ತೊಡೆದ ಕಾಶ್ಮೀರರಾಂಗರಾಗಾದಿಗಳ್,
ಮುಡೆಗೂಳ್, ಬಿಳ್ಪುಡೆ, ಬಾಯತಂಬುಲಮಿವಸ್ಪೃಶ್ಯಂಗಳೇ ನಲ್ಲವೇ॥

ಇದಿರಲ್ಲಿ ಮೂರು ಲೋಕಗಳೇ ನಿಂತರೂ ಅನಂತಪರಾಕ್ರಮಿಯಾದ ರಾಮನು ಅನನ್ಯಸಹಾಯನಾಗಿರುವನು. ಅಂತಹನ ಪ್ರಾಣಪ್ರಿಯೆಯಾದ ನನ್ನನ್ನು ನೀನು ಇಲ್ಲಿಗೆ ಕದ್ದೊಯ್ದಿಯಾದುದರಿಂದ, ಅವರ ಬಾಣಕೋಟಿಗಳು ಆಕಾಶವನ್ನು ಮುಚ್ಚಿ, ಈ ಲಂಕೆಯೆಲ್ಲಾ ಸಂಜೆಯು ಮೋಡದ ಕತ್ತಲಲ್ಲಿದ್ದಂತಾಗುವುದು. ಆಗ ಸಂಧ್ಯಾರಾಗಕ್ಕಾಗಿ ಎಷ್ಟು ಮಂದಿಯು ನೆತ್ತರು ಹಾರಿ ಭೂಮ್ಯಾಕಾಶಗಳು ಕೆಂಪಾಗುವುವು! ನನ್ನಲ್ಲಿ ಪತಿವಿಯೋಗದಿಂದುಂಟಾಗುವ ದುಃಖದ ಜ್ವಾಲೆಯು ನಿನ್ನ ಕುಲವನ್ನೆ ಸುಡುವುದು. ನೀನಾಗಿ ಈ ಬೆಂಕಿಯ ಕಿಡಿಯನ್ನು ಪಂಚವಟಿಯಿಂದ ಕಷ್ಟಪಟ್ಟು ತಂದಿರುವೆ, ಇನ್ನೂ ನನ್ನ ಮಾನಕ್ಕೆ ಹಾನಿತರುವ ಮಾತುಗಳನ್ನಾಡಿ ನಿನ್ನ ದುರ್ಗತಿಯ ಪ್ರಕಾರಗಳನ್ನು ಹೆಚ್ಚಿಸಿಕೊಳ್ಳದಿರು. ನಡೆ!' ಎಂದಳು. ರಾವಣನು ಇನ್ನೊಂದು ದಿನ ಆಡಿಸಿ ನೋಡುವೆನೆಂದನು. ಅವಳು 'ರಾಮ, ರಾಮ',—ಎಂದು ಪುನಃ ರಾಮಧ್ಯಾನವನ್ನೆ ಕೈಕೊಂಡಳು.

# ೫. ಸುಂದರಕಾಂಡ

ಕಪಿಧ್ವಜರಾದ ವಾನರರಿಗೆ ಅಧಿರಾಜನಾಗಿ ಸುಗ್ರೀವನು, ವಾಲಿಯ ಮರಣಾನಂತರ ಬಹುಕಾಲದ ಸುಖವನ್ನು ಅನುಭವಿಸುತಿದ್ದನು. ವಾನರ ಜಾತಿಯವರೂ, ಭಲ್ಲೂಕರೂ, ಬರ್ಬರರಾದ ಅನಾರ್ಯಕುಲದವರು. ಆರ್ಯರಲ್ಲಿದ್ದಂತೆ ಏಕಪತ್ನೀವ್ರತವೂ ವಿವೇಕವೂ ಇವರಲ್ಲಿರಲಿಲ್ಲ. ಆದರೆ ಸ್ವಭಾವತಃ ಗುಡ್ಡ ಬೆಟ್ಟಗಳಲ್ಲಿ ಸ್ವೇಚ್ಛಾಚಾರಿಗಳಾಗಿದ್ದು, ಗೆಡ್ಡೆಗೆಣಸು ಹಣ್ಣು ಹಂಪಲುಗಳನ್ನು ತಿಂದು ಬದುಕುತಿದ್ದ ಕಾರಣ, ಇವರು ದೇಹದಲ್ಲಿ ಶಕ್ತಿ ಯುಳ್ಳವರೂ ಕಷ್ಟಗಳನ್ನು ಸಹಿಸಬಲ್ಲವರೂ ಆಗಿದ್ದರು. ಸುಗ್ರೀವನು ಪಟ್ಟಾಭಿಷಿಕ್ತನಾಗಿ, ರಾಮನಿಗೆ ತಾನು ಮಾಡಿಕೊಡಬೇಕಾದ ಕಾರ್ಯ ನಿರ್ವಾಹಕ್ಕೆ ಇನ್ನೂ ಮಳೆಗಾಲವಾದುದರಿಂದ, ವಿಷಯೋಪಭೋಗಗಳಿಗೇ ಮನಸ್ಸುಕೊಟ್ಟು ಹಗಲೂ ರಾತ್ರಿ ನರ್ತನಾದಿಗಳಲ್ಲಿಯೂ ಮದ್ಯಪಾನ ವಿಲಾಸಗಳಲ್ಲಿಯೂ ಮಗ್ನನಾಗಿಯೆ ಇದ್ದನು. ಆದರೆ ದಿನೇ ದಿನೇ ರಾಮನಿ ಗಾಗಿ ತಾನು ವಹಿಸಿಕೊಂಡುದನ್ನು ಮರೆಯುತ್ತಾ ಬಂದನು. **ಸಂಕಟ** ಕಾಲದಲ್ಲಿ ಹರಿಕೆಹೊತ್ತುಕೊಳ್ಳುವುದೂ, ಸುಖಕಾಲದಲ್ಲಿ ದೇವರನ್ನೆ ಮರೆ ವುದೂ ಸಾಮಾನ್ಯವಾಗಿ ನರರೆಲ್ಲರ ಮೂಢತನದ ಲಕ್ಷಣವು; ಎಂದ ಮೇಲೆ ವಾನರರ ಮಾತೇಕೆ ?

ವರ್ಷಕಾಲವು ಮುಗಿದೊಡನೆಯೆ, ಸುಗ್ರೀವನಿಗೆ ಆತನ ಕರ್ತವ್ಯ ವನ್ನು ಮಾಡಲು ರಾಮನು ನೆನಪುಹುಟ್ಟಿಸಿದನು. ಅವನಿಗೆ ಅರಿವು ಹುಟ್ಟಿದು. ಅಮಲೇರಿದವನು ಮನೆ ಬಿಡನು; ಆಲಸ್ಯದಲ್ಲೆ ಇದ್ದು ಜಾಗೃತಿಯಿಲ್ಲದವ ನಾಗುವನು, ಜಡನಾಗುವನು. ಸುಗ್ರೀವನ ಸುದ್ದಿ ಇಲ್ಲ. ಇನ್ನೆಷ್ಟು ದಿನ ಹೀಗಿರಬಹುದು ? ರಾಮಲಕ್ಷ್ಮಣರಿಬ್ಬರೂ ಕೃತಘ್ನನನ್ನು ತಿದ್ದುವುದಕ್ಕೆ ಮುಂದಾದರು. ಲಕ್ಷ್ಮಣನೆ ಮುಂದೊತ್ತಿ ಸುಗ್ರೀವನ ಸಭೆಗೆ ಬಂದನು, ಸುಗ್ರೀವನು ಕಾಣಸಿಗುವುದೇ ದುರ್ಲಭವಾಯಿತು. 'ಎಷ್ಟೆಂದರೂ ನಾವು ಇಟ್ಟ ಅರಸು; ಕಾಣಲು ಸಮಯವಿಲ್ಲವಂತೆ! ಬರುವನಾದರೆ ಬರಲಿ. ಇಲ್ಲದಿದ್ದಲ್ಲಿ ನಾವು ಬೇರೆ ಉಪಾಯಮಾಡುವೆವು. ಇದು ಸುಗ್ರೀವನಿಗೆ

ಒಳಿತಲ್ಲ. ಅವನು ಪ್ರಾಣವನ್ನೂ ಕಳೆದುಕೊಳ್ಳಬಹುದು; ಮಾನ ಉಳಿ ಯದು; ರಾಜ್ಯವು ಸಿಗದು' ಎಂದು ಸಭೆಯಲ್ಲಿ ಹೇಳಿದನು.

ಸಭಿಕರಲ್ಲಿ ಹನುಮಂತನು, ಲಕ್ಷ್ಮಣನನ್ನು ಕುಳ್ಳಿರಿಸಿ, ತಾನೆ ಸುಗ್ರೀವನನ್ನು ಅವನ ಅಂತಃಪುರದಲ್ಲಿ ಕಂಡು ನಾನಾ ಬಗೆಯಾಗಿ ಬೋಧಿಸಿದನು. ಬೇಡಿ, ಬೆದರಿಸಿ, ಅವನಲ್ಲಿ ಜಾಗೃತಿಯನ್ನು ಉಂಟು ಮಾಡಿದನು. ಅವನು ಹೀಗೂ ಹೊರಬರಲಿಲ್ಲ. ಲಕ್ಷ್ಮಣನನ್ನು ಕಾಣು ವುದಕ್ಕೆ ಇಷ್ಟು ಅಸಡ್ಡೆ! ಅವನು ಆಗಲೆ ಧನುರ್ಬಾಣಗಳನ್ನು ಹಿಡಿದು ಕೊಂಡು ಎದ್ದು ನಿಂತನು. ಇನ್ನು ಸುಗ್ರೀವನನ್ನು ಕಾಪಾಡುವರಾರು? ಆಗ ಸುಗ್ರೀವನು ಪ್ರಾಣಭಯದಿಂದ ಓಡ್ಯೋಡಿ ಬಂದು, ಅವನ ಕಾಲಿಗೆರಗಿ ದನು. ವಿನಯಪೂರ್ವಕವಾಗಿ ಕ್ಷಮೆ ಬೇಡಿದನು. ಲಕ್ಷ್ಮಣನು ಬೇಗನೆ ಶಾಂತನಾಗಲಿಲ್ಲ; ಅವನು ಕೋಪದಿಂದ ಕೆಂಡದಂತೆ ಉರಿಯುತಿದ್ದನು. ಅಂದಿನಿಂದ ಇನ್ನೊಂದು ತಿಂಗಳೊಳಗೆ ಸೀತೆಯನ್ನು ಹುಡುಕಿಸುವೆನು ಎಂದು ಆಣೆಯಿಟ್ಟುಕೊಂಡು ಅವನು ಹೇಳಿದ ಬಳಿಕ ಮಾತ್ರವೆ,—'ಆಗ ನೋಡುವೆನು' ಎಂದು ಲಕ್ಷ್ಮಣನು ಸಮಾಧಾನಗೊಂಡು, ಅಲ್ಲಿಂದ ರಾಮನೆಡೆಗೆ ಬಂದು, ಎಲ್ಲವನ್ನೂ ತಿಳುಹಿದನು.

ಸುಗ್ರೀವನು ಇನ್ನು ಸ್ವಲ್ಪ ಚಟುವಟಿಕೆಗೆ ಪ್ರಾರಂಭಿಸಿದನು. ಮಂತ್ರಿ ಯಾದ ಹನುಮಂತನು ಸೈನ್ಯಗಳನ್ನು ಕೂಡಿಸುವುದರಲ್ಲೆ ಆಸಕ್ತನಾದನು. ಬಳಿಕ ರಾಮಲಕ್ಷ್ಮಣರನ್ನು ಅರಮನೆಗೆ ಕರೆಯಿಸಿಕೊಂಡು ವಾನರಸೇನೆಯ ಸನ್ನಾಹವನ್ನು ತೋರಿಸಿದನು. ನಂತರ ಸೀತಾದೇವಿಯನ್ನು ಹುಡುಕಿ ಬರಲು ವಾನರವೀರರಿಗೆ ಅಪ್ಪಣೆಯಾಯಿತು. ಗುಡ್ಡಬೆಟ್ಟ, ಹೊಳೆ, ಕೆರೆ, ವನ ಉದ್ಯಾನ ಒಂದನ್ನೂ ಬಿಡದೆ ಅವರು ಎಲ್ಲೆಲ್ಲಿಯೂ ಹುಡುಕಲಾರಂಭಿಸಿ ದರು. ರಾವಣನು ದೇವಿಯನ್ನು ಲಂಕೆಗೆ ಒಯ್ದಿರಬೇಕೆಂದೇ ಅವರು ನಿಶ್ಚಯಮಾಡಿದರು. ಹಾಗಾದರೆ, ಈ ಸಾಗರವನ್ನು ದಾಟುವುದಾರು? ಇದೊಂದು ದೊಡ್ಡ ಚಿಂತೆ. ಈ ಕಾರ್ಯವನ್ನು ಸಾಧಿಸುವವನು ಹನು ಮಂತನೇ ಒಬ್ಬನೆಂದು, ಎಲ್ಲರೂ ಅವನನ್ನೆ ಈ ಸಾಗರ ದಾಟಲು ಕೇಳಿ ಕೊಂಡರು. ಸುಗ್ರೀವನನ್ನು ವಂದಿಸಿ, ರಾಮಲಕ್ಷ್ಮಣರ ಆಶೀರ್ವಾದವನ್ನು ಪಡೆದು, ಸೀತೆಗೆ ಹೇಳತಕ್ಕುದನ್ನು ರಾಮನಿಂದ ತಿಳಿದುಕೊಂಡು, ಮಹಾ

ಬಲನಾದ ಹನುಮಂತನು ಬಹಳ ಕೌಶಲದಿಂದ ಲಂಕೆಗೆ ಹೊರಟನು; ಬಲುಬೇಗನೆ ಅಲ್ಲಿಗೆ ತಲಪಿದನು.

ಲಂಕೆಯು ಅದೆಂತಹ ಸುಂದರಸ್ಥಾನವು! ಚಿನ್ನ ರತ್ನ ಸ್ಫಟಿಕಗಳಿಗೆ ಮಿತಿಯಿಲ್ಲ. ಗುಡಿಸಲೊಂದೂ ಇಲ್ಲ, ಎಲ್ಲವೂ ಮಂದಿರಗಳೇ. ಅದೊಂದು ಅರಮನೆಗಳ ಊರೆನ್ನಬಹುದು. ಎಷ್ಟು ಉದ್ಯಾನಗಳು, ವಿಹಾರಸ್ಥಾನಗಳು, ಹೂದೋಟಗಳು! ಎತ್ತ ನೋಡಿದರೂ ರಮಣೀಯ. ಆದರೆ ಅದನ್ನು ನೋಡಿಯೆ ಕುಳಿತುಕೊಳ್ಳುವುದೆ! ಸೀತೆಯೆಲ್ಲಿ? ಎಲ್ಲಿ, ಅರಮನೆಯಲ್ಲಿ ಇರಬಹುದೆ? ಹನುಮಂತನು ಅರಮನೆಗೇ ತೆರಳಿದನು. ರಾವಣನನ್ನು ಅವನು ಕಂಡುದು ಇದೇ ಮೊದಲು. ಅವನನ್ನು ನೋಡಿ ಹನುಮಂತನು ಮೂಗನಾದನು. ಅವನು ನಿದ್ದೆ ಹೋಗಿರುವನು. ಆಗಲೂ ಅವನ ತಲೆಗೆ ಮುಕುಟವಿದೆ! ರಾಜವೇಷವನ್ನು ಧರಿಸಿಕೊಂಡೇ ಇರುವನು. ಆ ಮನೆಯಲ್ಲಿ ಕಸ್ತೂರಿಯ ಸುವಾಸನೆ ತುಂಬಿದೆ. ಹನುಮಂತನು ಎತ್ತೆತ್ತಲೂ ಹುಡುಕಿದನು. ಅಲ್ಲಿ ಸೀತಾದೇವಿಯಂತಹ ಯಾವ ಸ್ತ್ರೀಯನ್ನೂ ಕಾಣಲಿಲ್ಲ. ಸುತ್ತಲಿನ ಎಲ್ಲ ಮಂದಿರಗಳನ್ನೂ ನುಗ್ಗಿ ನೋಡಿದನು. ಇಲ್ಲ, ಸೀತೆಯಿಲ್ಲ.

ಆದರೆ ಹನುಮಂತನು ಸುಲಭವಾಗಿ ಸುಮ್ಮನಾಗುವನೆ? ವನ-ಉಪವನಗಳನ್ನು ನುಗ್ಗಿದನು. ಅಲ್ಲೆಲ್ಲಿಯೂ ಸೀತೆಯಿಲ್ಲ. ಕೊನೆಗೆ ಅಶೋಕವನಕ್ಕೆ ತೆರಳಿದನು. ಅದರಷ್ಟು ಸುಂದರವಾದ ವನವು ಮೂರು ಲೋಕಗಳಲ್ಲಿಲ್ಲ. ಪ್ರತಿಯೊಂದು ಗಿಡ, ಪ್ರತಿಯೊಂದು ಪೊದರನ್ನೂ ಹುಡುಕಿದನು. ದೂರದಲ್ಲಿ ಕೆಲವು ದಾಸಿಯರು ಅತ್ತಿತ್ತ ತಿರುಗುತ್ತಿರುವುದನ್ನು ಕಂಡನು. ಅವರ ಮೂಗು ಬಾಯಿಗಳು ಚಪ್ಪಟೆ! ಕೈಕಾಲುಗಳು ಉದ್ದುದ್ದ! ದಪ್ಪವಾದ ಮೈ. ಪ್ರತಿಯೊಬ್ಬಳ ಕೈಯಲ್ಲಿ ಕಬ್ಬಿಣದೊಂದು ದೊಣ್ಣೆ. ಯಾರನ್ನಾದರೂ ಹೊಡೆಯಲು ಅಪ್ಪಣೆ ಪಡೆದಿರುವಂತೆ ತೋರುತ್ತಿದೆ. ಸುಂದರಿಯೊಬ್ಬಳು ಗಲ್ಲಕ್ಕೆ ಕೈಯೊತ್ತಿ ಕುಳಿತಿರುವಳು. ಕೇವಲವಾಗಿ ಅಳುವಳು. ಅವಳ ಮುಖ ಬಾಡಿರುವುದು. ಅವಳ ಮೈ ಬಿಳುಪೇರಿದೆ. ತಲೆಯ ಕೂದಲರಾಶಿಯನ್ನು ಬಾಚಿಕೊಂಡುದಿಲ್ಲ; ಅದಕ್ಕೆ ಎಣ್ಣೆ ಸವರಿದುದೂ ಇಲ್ಲ. ಬಟ್ಟೆಗಳೆಲ್ಲ ಚಿಂದಿಯಾಗಿವೆ. ದುಃಖಿತೆಯಾದ ಅವಳು ನಿಟ್ಟುಸಿರಿಡುವಳು

ಏಕವೇಣೀಧರೆಯು, ಅಶ್ರುಜ—
ಲಾಕುಲಾಯತ ಲೋಚನೆಯು, ಉ—
ದ್ರೇಕ ಶೋಕಾನ್ವಿತೆಯು ಅಂತಸ್ತಾಪವಿಹ್ವಲೆಯು||
ಶೋಕವನದಡಿ ಅಧಿಕಪುಣ್ಯ—
ಶ್ಲೋಕಚರಿತೆಯು ಮಲಿನಪಟಪರಿ
ದಾಕೃತಿಯು ನವಿರಳಕೃಶಾಂಗಿಯು ಕಂಡನಾಹನುಮ.

ಪದ್ಮಗಂಧಿಯು, ಪದ್ಮವದನೆಯು |
ಪದ್ಮಸದ್ಮನಿವಾಸನೆಯು, ಪದ—
ಪದ್ಮ ಕರಪದ್ಮಂಗಳೊಪ್ಪುವ, ಪದ್ಮಲೋಚನೆಯು |
ಪದ್ಮಜಾಂಬಕಿ ಪದ್ಮಿನಿಯು ಹೃ—
ತ್ಪದ್ಮದೊಳು ರಘುರಾಮಚಂದ್ರನ
ಪದ್ಮಪಾದವ ನೆನೆವ ಸೀತೆಯು ಕಂಡನಾಹನುಮ.

ಹೊಗೆಯುಲದ ಪುತ್ತಳಿಯವೊಲು, ಹಿಮ—
ವಗಿದ ತಾವರೆಯಂತೆ, ಬಿಚ್ಚದೆ
ಬಿಗಿದ ಮುತ್ತಿನ ಚಿಪ್ಪಿನಂದದಿ, ರಾಹುಲಂಬಿಸಿದ |
ಮೃಗಧರನವೊಲು, ಗೂಢದರ್ಥವ
ತೆಗೆಯಬಾರದ ಕೃತಿಯ ವೋಲಿ—
ರ್ದನಗಣಿತಾಮಲ ಪುಣ್ಯಮೂರ್ತಿಯು ಕಂಡನಾಹನುಮ.

ಈಗ ಅವಳೊಡನೆ ಸಂಭಾಷಣೆಮಾಡುವುದಾದರೂ ಹೇಗೆ? ಸುತ್ತಲೂ ದಾಸಿಯರ ಕಾವಲಿದೆಯಲ್ಲವೆ?

ಹನುಮಂತನು ಅಲ್ಲೆ ಕಾದು ಕಾದು, ಕೊನೆಗೆ ಅವಕಾಶಕಂಡನು. ಸೀತಾದೇವಿಗೆ ರಾಮನ ಮುದ್ರೆಯುಂಗುರವನ್ನು ಪರಿಚಯಕ್ಕಾಗಿ ಕೊಟ್ಟನು. ಇಲ್ಲವಾದಲ್ಲಿ, ಅವಳು ಇವನನ್ನು ನಂಬುವಳೇ ? ಇಂತಹ ವಿಕಾರಿಗಳೆಷ್ಟೊ ಮಂದಿ ರಾವಣನ ಕಡೆಯಿಂದ ಅವಳನ್ನು ನಾನಾ ವಿಧವಾಗಿ ಪೀಡಿಸಿರುವರು. ಆ ಉಂಗುರವನ್ನು ಸೀತಾದೇವಿಯು ತಲೆಯ ಮೇಲಿಟ್ಟುಕೊಂಡು ವಂದಿಸಿದಳು; ಎದೆಗೆ ಒತ್ತಿಕೊಂಡು ಮೈಮರೆತಳು; ಮುದ್ದಿಟ್ಟು ಕಣ್ಣೀರಿಟ್ಟಳು;

ತರುವಾಯ ಹನುಮಂತನನ್ನು ಆಶೀರ್ವದಿಸಿದಳು. 'ರಾಮಚಂದ್ರನು ನನ್ನನ್ನು ಇಲ್ಲಿಂದ ಬೇಗನೇ ಒಯ್ಯಬೇಕೆಂದು ನನ್ನ ಪ್ರಾರ್ಥನೆ ಇದೆ. ವಿಳಂಬವಾದರೆ ನನ್ನ ಪ್ರಾಣಗಳು ಉಳಿಯವು' ಎಂದು ಅವಳು ಅವನಿಗೆ ಹೇಳಿದಳು. ಕಿಷ್ಕಿಂಧೆಯಲ್ಲಿ ನಡೆದಿರುವ ಸರ್ವಸನ್ನಾಹದ ವೃತ್ತಾಂತವನ್ನೆಲ್ಲ ಹನುಮಂತನು ಅವಳಿಗೆ ಬಿನ್ನವಿಸಿದನು. 'ಕಪಿವರನೆ! ಬಂದಂತೆಯೇ ಗೋಪನವಾಗಿ ಇಲ್ಲಿಂದ ತೆರಳುವವನಾಗು. ನಿನಗೆ ದಾರಿಯಲ್ಲಿ ಯಾವುದೊಂದು ಆತಂಕವೂ ಬಾರದಿರಲಿ. ನನ್ನ ಈ ಚೂಡಾಮಣಿಯನ್ನು ಆರ್ಯಪುತ್ರನಿಗೆ ಒಪ್ಪಿಸು. ಆತನ ಚರಣದರ್ಶನದ ಆಸೆಯಿಂದಲೆ ನಾನು ಜೀವಹಿಡಿದಿರುವೆನೆಂದು ತಿಳುಹು' ಎಂದು ಆಶೀರ್ವದಿಸಿ ಕಳುಹಿಕೊಟ್ಟಳು.

ಹನುಮಂತನು ಅಲ್ಲಿಂದ ಹಿಂದಕ್ಕೆ ಹೊರಟನು. ಅಲ್ಲಿ, ಅವೆಷ್ಟು ಬಗೆಯ ಹಣ್ಣುಗಳು! ಬಾಯಿ ಒಸರುತ್ತಿದೆ! ಹನುಮಂತನು ವನದೊಳಕ್ಕೆ ಹೊಕ್ಕನು. ಕೂಡಲೆ ರಾಕ್ಷಸರು ಅವನನ್ನು ಆಕ್ರಮಿಸಿದರು. ಅವರನ್ನು ಹನುಮಂತನು ಕೊಂದು, ತನಗೆ ಬೇಕಾದಷ್ಟು ಹಣ್ಣುಗಳನ್ನು ಕಿತ್ತು ತಿಂದನು. ಈ ವೃತ್ತಾಂತವನ್ನು ರಾವಣಪುತ್ರನಾದ ಅಕ್ಷಯನು ಭರದಿಂದ ಕೇಳಿ, ವನಕ್ಕೆ ಬಂದು, ಹನುಮಂತನನ್ನು ಸೆರೆಹಿಡಿಯಿಸ ತೊಡಗಿದನು. ಅವನನ್ನು ಹನುಮಂತನು ಕ್ಷಣದೊಳಗೆ ಕೊಂದನು. ನಂತರ ವೀರಶ್ರೇಷ್ಠನಾದ ರಾವಣಪುತ್ರ ಇಂದ್ರಜಿತುವು ಹನುಮಂತನನ್ನು ನಾಗಪಾಶಗಳಿಂದ ಬಿಗಿದು ತಂದೆಯಿರುವಲ್ಲಿಗೆ ಕೊಂಡೊಯ್ದನು. ಹನುಮಂತನು ತನ್ನ ಇಂಗಿತವನ್ನು ಅವರಾರಿಗೂ ತಿಳಿಯಗೊಡದಂತೆ, ಸತ್ತವನಂತೆ ಅಲ್ಲೆ ಬಿದ್ದುಕೊಂಡನು. ರಾವಣನು ಅವನಿಂದಾದ ಹಾವಳಿಯನ್ನು ಕೇಳಿ, ಅವನನ್ನು ಕೂಡಲೆ ಸುಟ್ಟುಹಾಕುವಂತೆ ಸೇವಕರಿಗೆ ಆಜ್ಞಾಪಿಸಿದನು. ಅವರು ಅವನ ಬಾಲಕ್ಕೆ ಚಿಂದಿಗಳನ್ನು ಸುತ್ತಿ, ಎಣ್ಣೆಹೊಯಿದು, ಬೆಂಕಿ ಹೊತ್ತಿಸಿದರು.

ಬಾಲಕ್ಕೆ ಬೆಂಕಿ ತಗಲಿದೊಡನೆಯೆ, ಹನುಮಂತನು ಈ ಮನೆ—ಆ ಮನೆ ಎಂದೆನ್ನದೆ ಹಾರುತ್ತಲಿದ್ದು, ಭಯಂಕರವಾದೊಂದು ಅಗ್ನಿಯನ್ನು ಪ್ರಜ್ವಲಗೊಳಿಸಿದನು. ಸುಂದರವಾದ ಲಂಕಾಪುರವು ಭಸ್ಮವಾಯಿತು.

ಪರವಧೂವ್ಯಸನಿಗಳ ಸಂಗವು
ನರಕಭಾಜನವೆಂದು ನೆರೆ ಧಿ-
ಕ್ಕರಿಸಿ ದಶಕಂಧರನ ನಗರಾಂಗನೆ ವಿರಾಗದಲಿ।
ಪರಮಪ್ರಾಯಶ್ಚಿತ್ತ ಅಂಗೀ-
ಕರಿಸಿ ಹೊಗಲುದ್ಯೋಗಿಸಿದ ನಿ-
ರ್ಭರದ ನಿಡುಗಿಚ್ಚಿನ ವೊಲಿರ್ದುದು ದಹನ ರಿಪುಪುರದ.

ಎಷ್ಟು ರಾಕ್ಷಸರು ಸತ್ತರೊ, ಸತ್ತವರೆ ಬಲ್ಲರು. ಆದರೆ ಅಶೋಕವನದ ಕಡೆಗೆ ಈ ಬೆಂಕಿಯು ಸುಳಿಯದುದು ಆದೊಂದು ಅದ್ಭುತ ವಿಷಯ. 'ಎಷ್ಟೇ ಬುದ್ಧಿವಂತನಿರಲಿ, ಮಹಾತ್ಮನಿರಲಿ,—ರಾಮನು ವಿಚಾರವಿಲ್ಲದವನು; ಬಂದ ನಾನೇ ಸೀತೆಯನ್ನೀಗ ಎತ್ತಿಕೊಂಡು ಹೋದರೆ ಚೆನ್ನಾಗದೆ! ಅವನೇತಕ್ಕೆ ಹುಡುಕಿ ಬಾರೆಂದನು? ಹಿಡಿದು ತಾರೆನ್ನಲಿಲ್ಲ? ರಾವಣನನ್ನೆ ಕೊಲ್ಲ ಬೇಕಾದರೂ ನನ್ನಿಂದಾಗದೆ? ಇನ್ನೂ ಕಷ್ಟಗಳನ್ನೇಕೆ ಕಟ್ಟಿಕೊಂಡಿರುವನು? ಅಥವಾ ಬಂದರೂ ಇನ್ನು ನಾನು ಕಂಡ ಲಂಕಾಪುರವನ್ನು ಅವನು ಕಾಣುವನೆ? ಅಥವಾ ಅವನನ್ನು ವಿಚಾರಿಸದೆ ಬಂದ ನಾನೆ ಹೆಡ್ಡನು' ಎನ್ನುತ್ತ, ಹನುಮಂತನು ಬಾಲದ ಬೆಂಕಿಯನ್ನು ನೊಂದಿಸಿ, ತ್ವರೆಯಾಗಿ ಕಿಷ್ಕಿಂಧೆಗೆ ಮರಳಿದನು.

ಆದರೆ ಅತ್ತ ಲಂಕಾಪುರದಲ್ಲಿ:—

**ಪ್ರತಿಪಕ್ಷಮುಂಟೆ ಲಂಕಾ**
**ಪತಿಗಣುವಂ ರಾವಣಂಗಿದಿರ್ಚುವನೆ, ಮಹಾ।**
**ಸತಿ ಸೀತೆಯ ಶೋಕಾನಳ**
**ಹತಿಯಿಂ ಬೆಂದತ್ತು ಕೂಡೆ ಲಂಕಾನಗರಂ॥**

ಎಂದೇ ಲಂಕೆಯ ಜನರು ಬೊಬ್ಬಿಟ್ಟು ಬಾಯಿ ಬಾಯಿ ಬಡೆದುಕೊಳ್ಳು ತಿದ್ದರು.

ಕಿಷ್ಕಿಂಧೆಯಲ್ಲಿ ಹನುಮಂತನನ್ನು ಕಂಡವರೆಲ್ಲ ವಿಸ್ಮಯ ಹೊಂದಿದರು! ಎಲ್ಲರ ಕೂಡೆ ಸೀತೆಯನ್ನು ಕುರಿತು ವೃತ್ತಾಂತವನ್ನು ಹೇಳುವುದೆ ಅವನಿಗೆ ಉದ್ಯೋಗವಾಯಿತು. ರಾಮಲಕ್ಷ್ಮಣರು ಮನಸ್ಸಿನಲ್ಲಿ ಸ್ವಲ್ಪ ಮಾತ್ರ ತೃಪ್ತಿ ಹೊಂದಿದರು; ಅವರು ದುಃಖವನ್ನು ಸುಲಭವಾಗಿ ಬಿಡಲಾಪರೇ?

ಸೀತಾಸ್ಮರಣೆಯಿಂದ ಅವರ ದುಃಖವು ಕಿಂಚಿತ್ತಾಗಿ ಹೆಚ್ಚಿತು. ಇನ್ನು ಲಂಕೆಗೆ ತಡವಮಾಡದೆ ತೆರಳಬೇಕೆಂದಾಯಿತು. 'ಸಿದ್ಧರಾಗಿರಿ' ಎಂದು ಸುಗ್ರೀವನ ಅಪ್ಪಣೆಯು ವಾನರಸೈನ್ಯಕ್ಕೆ ಪಸರಿತು. ಕೋಟಿ ಕೋಟಿ ವಾನರರು ಹೊರಟರು.

ಆದರೆ ಸಾಗರವನ್ನು ದಾಟುವ ಬಗೆಯಾವುದು ? ವೃದ್ಧನೂ ಬಹು ದರ್ಶಿಯೂ ಆದ ಜಾಂಬವಂತನು 'ನಮ್ಮೊಳಗೆ ನಳ ಎಂಬೊಬ್ಬ ಸೇನಾಪತಿ ಇರುವನಷ್ಟೆ, ಅವನು ದೇವತೆಗಳ ಶಿಲ್ಪಿಯಾದ ವಿಶ್ವಕರ್ಮನಿಗೆ ಮಗ ನಾಗಿರುವನು. ತಂದೆಯಂತೆಯೇ ಇವನೂ ಯೋಗ್ಯನು. ಕಲ್ಲಿನ ಕೆಲಸ ದಲ್ಲಿ ಇವನಂತಹರು ಅತ್ಯಪೂರ್ವ. ಅದುಕಾರಣ ಸಾಗರವನ್ನು ದಾಟುವ ಸೇತುವನ್ನು ನಿರ್ಮಿಸುವ ಉದ್ಯೋಗವನ್ನು ಅವನಿಗೆ ಕೊಟ್ಟರೆ, ಅದು ಉತ್ತಮವಾಗಿ ಸಾಗುವುದಲ್ಲವೆ ?' ಎಂದು ವಿಜ್ಞಾಪಿಸಿಕೊಂಡನು. ಯಾವು ದೊಂದು ಜಲಪ್ರವಾಹವನ್ನು ತಡೆಗಟ್ಟುವುದಕ್ಕೂ, ನೀರಿನಲ್ಲಿ ಕಲ್ಲುಗಳನ್ನಿಟ್ಟು ಕಟ್ಟುವುದಕ್ಕೂ ನಳನೆ ಪ್ರವೀಣನೆಂದು ಹೆಸರ್ಗೊಂಡಿದ್ದನು. ಅವನು ತನ್ನ ಕೌಶಲವನ್ನು ಉಪಯೋಗಿಸಿ, ಕೆಲವೇ ದಿನಗಳೊಳಗೆ ಸೇತುವನ್ನು ನಿರ್ಮಿಸಿ ಕೊಟ್ಟನು. ಬಂಡೆಗಳನ್ನು ಒತ್ತಾಗಿ ಇಡಿಸಿ, ಜೋಡಿಸಿ ಅವುಗಳ ಮಧ್ಯೆ ಸಂದಿನಲ್ಲಿ ಮಳಲನ್ನು ತುಂಬಿ, ಸೇನೆಗಳು ನಡೆದು ಹೋಗುವಷ್ಟು ಉತ್ತಮ ಉಪಯೋಗಕ್ಕೆ ಬರುವಂತಹ ಸೇತುವನ್ನು ಕೆಲವೇ ದಿನಗಳೊಳಗೆ ಸಿದ್ಧ ಮಾಡಿದನು. ರಾಮಲಕ್ಷ್ಮಣರು ಅದನ್ನು ಪರೀಕ್ಷಿಸಿ ಇನ್ನು ಸೇನೆಗಳು ಮುನ್ನಡೆಯಲೆಂದರು; ಆಗ—

**ಅರಸ ನಿಂದಿದಿರಿಸಲಿ, ತಾರಕಿ**
**ತೊರೆಯವೊಲು, ಬಲುಸೇತುಸಾಗರ**
**ನೊರೆಯನುಗಿದುಬ್ಬಣದವೊಲು, ಆ ದಶಕುಲಾಧಿಪನ |**
**ಪುರದ ಪಥದವೊಲಾ, ದಶಾಸ್ಯನ**
**ಕರೆದು ತೋರುವ ಮೃತ್ಯು ನೀಡಿದ**
**ಕರದವೊಲು, ಕಣ್ಗೆಸೆದುದನುಪಮ ಸೇತು ಬಂಧನದ.**

ವಾನರ ಸೇನೆಯೆಲ್ಲವೂ ನಿರಾಂತಕವಾಗಿ ಲಂಕೆಗೆ ತಲಪಿತು.

ಲಂಕಾದಹನವಾದಂದಿನಿಂದ ರಾವಣನು ಏನು ಮಾಡುತಿದ್ದನು? ಸ್ವಲ್ಪ ಬೆದರಿದ್ದನು, ಯಾವಾಗಲೂ ಮುಂದೇನಾಗುವುದೊ ಎಂದೇ ವಿಚಾರ ಮಾಡುತಲಿದ್ದನು. ಸೀತೆಯ ಉದ್ಧಾರಕ್ಕಾಗಿ ಇನ್ನಾರಾದರೂ ಬರುವ ಮೊದಲೇ ಅವಳನ್ನು ಒಲಿಸಿಕೊಳ್ಳಲೂ ಪೇಚಾಡುತಲಿದ್ದನು. ಎಂದಿನಂತೆ ಅಂದೂ ಸಭೆ ಸೇರಲು, ಅತಿ ಭಯಂಕರ ಪರಾಕ್ರಮಿಗಳಾದ ರಾಕ್ಷಸರು ಸಭೆಗೆ ಬಂದಿರಲು, ದೂತನೊಬ್ಬನು ಬಂದು, 'ಇದುವರೆಗೆ ನಾವು ಎಂದೂ ಕೇಳದಿದ್ದ, ಎಂದೂ ಎಣಿಸದಿದ್ದ ಜಯಧ್ವನಿಯೊಂದು ಇಂದು ಕೇಳಿಸು ತ್ತಲಿದೆ, ಏನೊಂದು ತಿಳಿಯದು,' ಎಂದು ಭೀತನಾಗಿ ಕಾಲಿಗೆರಗಿ ಹೇಳಿ ಕೊಂಡನು. 'ಲಂಕೆಯನ್ನು ಸುಡಬಂದ ವಾನರರಂತಹರನೇಕರು ಹಿಂಡಾಗಿ ಇಲ್ಲಿಗೆ ಬಂದು ಸೀತೆಯನ್ನು ಬಿಡಿಸಿಕೊಂಡೊಯ್ಯಲಿರಬಹುದು,' ಎಂದು ರಾವಣನು ನುಡಿದನು. ಸಭಿಕರಲ್ಲಿ ಒಬ್ಬೊಬ್ಬರಾಗಿ ಎದ್ದು ನಿಂತು, ತಂತಮ್ಮ ಪರಾಕ್ರಮವನ್ನು ಹೊಗಳಿಕೊಂಡು ಆಯುಧ ಜಳಪಿಸಿ 'ಯುದ್ಧವಾಗಲಿ' ಎಂದರು. ಕಾಡುಮೃಗಗಳು, ಮನುಷ್ಯರು, ದೇವತೆಗಳು ಮುಂತಾದವ ರನ್ನು ಸೋಲಿಸಿದ ರಾಕ್ಷಸವೀರರು ಭಯಪಡುವುದುಂಟೆ?

ರಾವಣನ ತಮ್ಮನಾದ ವಿಭೀಷಣನು ಅಣ್ಣನಿಗೆ ಕೈ ಮುಗಿದು, 'ಲಂಕಾಧೀಶ್ವರಾ! ಲಾಲಿಸಬೇಕು. ತನ್ನ ಇಂದ್ರಿಯಗಳನ್ನು ಜಯಿಸಲಾರ ದವನು ಪ್ರಜೆಗಳನ್ನು ಆಳಲಾರನು, ಇನ್ನಾರನ್ನೂ ಜಯಿಸಲಾರನು. ತನ್ನ ಕುಲಕಾಂತೆಯಲ್ಲಿಯೆ ಸಂತಸಪಟ್ಟರೆ, ಅದರಿಂದ ತನ್ನ ಕುಲವು ವರ್ಧನ ಗೊಳುವುದು; ಪರವಧುವಿಗೆ ಎಳಸಿದರೆ ಅದೇ ಕುಲನಾಶಹೇತುವೆಂದು ಪ್ರಖ್ಯಾತವಾದ ಮಾತಿರುವುದು. ಇದನ್ನು ಪರಿಭಾವಿಸಿದರೆ, ಸೀತಾದೇವಿ ಯನ್ನು ಮನ್ನಣೆಯಿಂದ ರಾಮಚಂದ್ರನಿಗೆ ಒಪ್ಪಿಸಿಕೊಟ್ಟು, ಬಂಧುಬಳಗ ಗಳೊಡನೆ ನಾವು ಸುಖವಾಗಿರುವುದು ಉತ್ತಮವೆಂದು ನನಗೆ ತೋರು ವುದು. ರಾಮನು ಸಾಮಾನ್ಯ ಮನುಷ್ಯನಲ್ಲ. ಅವನು ತಾಟಕಿಯನ್ನೂ ಸುಬಾಹು ಮಾರೀಚರನ್ನೂ ಕೊಂದನು, ವಾಲಿಯನ್ನೂ ಕೊಂದನು, ಶಿವಧನುಸ್ಸನ್ನು ಮುರಿದು, ಪರಶುರಾಮನ ಧನುಸ್ಸನ್ನೂ ಭಂಗಗೊಳಿಸಿರು ವನು. ಇಂತಹನಿಗೆ ವಿರುದ್ಧವಾಗಿ ಯುದ್ಧವನ್ನು ಮಾಡಲೆಳಸುವುದರಿಂದ ಫಲವೇನೂ ಉಂಟಾಗದು. ಇವರು ಮುಖಸ್ತುತಿ ಪರಾಯಣರಾಗಿ

ಏನೇನನ್ನೊ ಹೇಳಿದರು. ಹೇಳಲಿ, ಇವರು ಈಗ ಆಡುವುದಕ್ಕೂ ಅಂದು ಅದೊಂದೇ ಕಪಿಯು ಮುಂದೆ ಇವರು ಮಾಡಿದುದಕ್ಕೂ ವಿಶೇಷವಾದ ತಾರತಮ್ಯವಿದೆಯೆಂದು ನಾವೆಲ್ಲರೂ ಬಲ್ಲೆವಲ್ಲವೆ?—ಆದುದರಿಂದ,—

**ಪರಿಜನವುಮಾಪ್ತ ಜನವುಂ**
**ಪುರವುಂ ಬಾಂಧವರು ಮಗಲದೊಂದೆಡೆಯೊಳ್ಸೈ ।**
**ತಿರಲಕ್ಕುಂ, ಜಾನಕಿಯುಂ**
**ಪರಿಹರಿಸಿದೊಡಲ್ಲದಂದಿರಲ್ಬಂದಪುದೇ?**

ಎಂದು ವಿನಯದಿಂದ ಬೇಡಿಕೊಂಡನು.

'ಶತ್ರುವನ್ನು ಪ್ರಶಂಸಿಸುವುದೆ? ಬಹು ಯತ್ನದಿಂದ ತಂದ ವನಿತಾ ರತ್ನವನ್ನು ಹುಲು ಮನುಷ್ಯರಿಗೆ ಬೆದರಿ ಮರಳಿಸುವುದೆ? ನನ್ನೊಡನೆ ಕಾದಿ ಸೋತವರನ್ನೆ ಇದು ವರೆಗೆ ಕಂಡಿರುವೆನಲ್ಲದೆ ಗೆದ್ದವರನ್ನು ಕಂಡುದಿಲ್ಲ,' ಎಂದು ರಾವಣನು ತನ್ನಲ್ಲಿ ತಾನೆ ಆಲೋಚಿಸಿದನು. ಮೊದಲೇ ದುರ್ಬುದ್ಧಿ; ಅದೀಗ ಸಭಿಕರ ಜಂಬದಿಂದ ಪುಟವಿಟ್ಟಂತಾಯಿತು. ಕ್ರೋಧೋನ್ಮತ್ತನಾದ ರಾವಣನು ವಿಭೀಷಣನನ್ನು ಜರೆದು ಬಯ್ದನಲ್ಲದೆ, ಎಡಗಾಲಿನಿಂದ ಒದ್ದನು. ಕೊಲ್ಲುತಿದ್ದನು, ತಮ್ಮನೆಂದು ಉಳಿಸಿದನು. ಅವನನ್ನು ನಗರದ ಹೊರಕ್ಕೆ ದೂಡಿ ಒಯ್ಯುವಂತೆ ಅಪ್ಪಣೆಕೊಟ್ಟನು. ಆಗ ಧರ್ಮಾತ್ಮನಾದ ವಿಭೀಷಣನು,—'ಅಣ್ಣಾ ದುರ್ಬೋಧನೆ! ಅಪಕೀರ್ತಿಗೆ ಹೆದರದೆ ಸೀತೆಯನ್ನು ತಂದು, ರಾಜ್ಯನಾಶಕರವಾದ ಯುದ್ಧಕ್ಕೂ ಹಿಂಜರಿಯದೆ ಬಲ್ಲಿದರೊಡನೆ ಯುದ್ಧಕ್ಕೆ ನಿಲ್ಲುವೆಯಂತೆ! ನಿಲ್ಲು. ರಾಮಬಾಣವು ಎಂದೂ ನಿರರ್ಥಕವಾದುದಲ್ಲ. ನಿನ್ನ ಮತ್ತು ಇವರ ದುರ್ದಶೆಯನ್ನು ನೋಡುವುದಕ್ಕಾಗಿ ನಾನಿಲ್ಲಿ ನಿಲ್ಲುವವನಲ್ಲ.' ಎಂದು ತನ್ನನ್ನು ತಾನೆ ಹೊರಡಿಸಿಕೊಂಡು ರಾಮಚಂದ್ರನ ಶಿಬಿರದ ಕಡೆಗೆ ತೆರಳಿದನು. ಅಲ್ಲಿಗೆ ತಲಪುತ್ತಲೆ,—

ರಾಮಚಂದ್ರನ ಪಾಳೆಯದಲ್ಲಿ, ಪ್ರಬಲ ವಿರೋಧಿಯಾದ ಲಂಕಾಧೀಶನ ಸೋದರನ ಆಗಮನದಿಂದ ಆಶ್ಚರ್ಯವುಂಟಾಯಿತು. ರಾಮಚಂದ್ರನು ಶರಣಾಗತರಾದವರಲ್ಲಿ ಸಂದೇಹ ಕಾಣುವವನಲ್ಲ. ಅದರಲ್ಲೂ ವಿಭೀಷಣನು ಭಗವದ್ಭಕ್ತನು; ಅವನ ನುಡಿಯೇ ರಾಮನಲ್ಲಿ ಭಕ್ತಿಪೂರ್ಣವಾದುದು. ಆದರೂ ವಾನರ ಸೇನಾಪತಿಗಳು ಅವನನ್ನು ಸುಲಭವಾಗಿ

ನಂಬುವರೇ? ರಾವಣನ ಸೋದರನು! ಸೋದರನು ಎಂದೂ ಸೋದರನಿಗೆ ಇದಿರುನಿಂತು ಹಗೆಯ ಪಕ್ಷವನ್ನು ಸೇರುವನೆ? ಯಥಾಸ್ಥಿತಿಯನ್ನು ವಿಭೀಷಣನು ವಿವರಿಸಿ, ಲಂಕಾಪುರದಲ್ಲಿನ ಯಾವತ್ತು ಅಂತರಂಗದ ವಿಚಾರಗಳನ್ನು ಮರೆಮಾಜದೆ ಹೇಳಿದನು.

ಬಾಳಬೇಕೆಂದೆಂಬವಗೆ ಚಾಂ- ।
ಡಾಲಗೃಹ ವೀಥಿಯಲಿ ಭಿಕ್ಷದ
ಕೂಳತಿರಿತಂದುಂಡು ಬದುಕುವು ದಧಿಕ ಸೌಖ್ಯ ಕಣಾ ।
ಕೇಳಿದೈ ರಾಜೇಂದ್ರ, ಮೂರ್ಖರ
ಕೇಳನೋಳದೊಳಿದ್ದು ಬದುಕುವ
ಖೂಳವೃತ್ತಿಯ ಬದುಕು ಕಷ್ಟಕೆ ಕಷ್ಟತರವೆಂದ.

ಅಣ್ಣನಿಗೆ ಅವನ ಪಾಪದ ಫಲವು ಒದಗುವಾಗ, ನಾವು ಅಲ್ಲಿದ್ದು ಅವನೊಡನೆ ದುರ್ಗತಿಗಿಳಿಯುವುದಕ್ಕಿಂತ, ಲೌಕಿಕ ವೈದಿಕಗಳೆರಡನ್ನೂ ಮೀರಿದ ಅಣ್ಣನನ್ನು ತ್ಯಜಿಸಿ ತಮ್ಮ ಚರಣದಾಸನಾಗುವುದೆ ನನ್ನ ಧರ್ಮವೆಂದು ಇತ್ತ ಸಾರಿದೆನು" ಎಂದನು. ಆದರೂ ಎಲ್ಲರೂ ಸಂಶಯ ಚಿತ್ತರಾದರು. ಆಗ ರಾಮನು "ಶರಣಾಗತನಾದ ಶತ್ರುವನ್ನಾದರೂ ಕಾಪಾಡುವುದು ಕ್ಷತ್ರಿಯರ ಧರ್ಮವು. ಅದೇ ಸಾಧುವಾದ ನೀತಿಯು. ಶತ್ರುವಿನ ಸೋದರನೆಂದು ಅವನು ನನಗೆ ಶತ್ರುವಾಗನು. ಅವನ ನಡೆನುಡಿಗಳು ಅಂತಹವಲ್ಲ. ಒಂದು ವೇಳೆ ಅವನು ಕಪಟಾಚರಣೆಯನ್ನು ಮಾಡಿರುವನಾದರೂ, ಎಂದಿಗೆ ಆಶ್ರಯಬೇಡುವನೊ ಅವನಿಗೆ ನಾನು ಅಭಯವನ್ನೆ ಕೊಡುವೆನು. ಯಾರ ಮಾತನ್ನು ಕೇಳಿಯೂ ಅವನನ್ನು ಪರಿತ್ಯಾಗ ಮಾಡಲಾರೆನು" ಎಂದನು. ಈ ಮಾತುಗಳನ್ನು ಕೇಳಿ ಸುಗ್ರೀವಾದಿಗಳು ಸುಮ್ಮನಾದರು.

ವಿಭೀಷಣನೊಡನೆ ಲಂಕಾಪ್ರವೇಶವಾಯಿತು. ರಾವಣನು ಆಗಲೆ ಭಸ್ಮಲೋಚನನೆಂಬ ರಾಕ್ಷಸನನ್ನು ವಾನರ ಸೇನೆಗಳನ್ನು ಸುಟ್ಟು ಕೊಲ್ಲಲು ಅಪ್ಪಣೆಕೊಟ್ಟನು. ಅವನು ಎಂದೋ ಸತ್ತು ಬಿದ್ದನು. ಸೇನೆಗಳು ಲಂಕೆಯನ್ನು ನಾಲ್ಕೂ ಕಡೆ ಮುತ್ತಿದುವು. 'ಜಯ ಸೀತಾರಾಮ!' ಎಂದು ಧ್ವನಿಯೆದ್ದಿತು.



# ೬. ಲಂಕಾಕಾಂಡ

ಇಪ್ಪತ್ತು ಯೋಜನಗಳ ವಿಸ್ತಾರವುಳ್ಳ ಪ್ರದೇಶದಲ್ಲಿ ವಾನರಸೇನೆಗಳು ಬೀಡುಗೊಂಡುವು. ರಾಕ್ಷಸರ ಸೈನಿಕರು ಕೋಟೆಗಳ ಹೆಗ್ಗೋಡೆಗಳನ್ನು ಹತ್ತಿ ಸೇತುವನ್ನು ನೋಡಿ ಆಶ್ಚರ್ಯಪಟ್ಟರು. ಸಮುದ್ರಕ್ಕೆ ಸೇತು ಕಟ್ಟಿದರೆಂಬುದೇ ವಿಚಿತ್ರವಲ್ಲವೆ? ಇದೆಂದೂ ಕೇಳದ ವಿಷಯವು. ಲಂಕೆಯು ಗತಿ ಏನಾಗುವುದೊ? ಎಂದು ಅವರು ವಿಚಾರಮಾಡುತಿರುವಷ್ಟರಲ್ಲಿ 'ಜಯ ಸೀತಾರಾಮ!' ಎಂಬ ಧ್ವನಿಯನ್ನು ಮಾಡುತ್ತ ವಾನರಸೇನೆಗಳು ಕೋಟೆಯ ಬಳಿಗೇ ಬಂದುವು. ರಾವಣನು ಅವರ ಸಂಖ್ಯೆಯೆಷ್ಟು ಸನ್ನಾಹವೇನು ಎಂದು ತಿಳಿದುಕೊಳ್ಳಲು ತನ್ನ ಮಂತ್ರಿಗಳಾದ ಶುಕಸಾರಣ ರನ್ನು ಕಳುಹಲು, ಅವರು ವಿಚಾರಮಾಡ ಬಂದವರೇ ಭಯಗ್ರಸ್ತರಾದರು. ಅವರು ವಾನರರಂತೆ ವೇಷಹಾಕಿಕೊಂಡು ಅತ್ತ ಬಂದರು. ವಿಭೀಷಣನು ಇದನ್ನು ತಿಳಿದು ರಾಮನಿಗೆ ಸೂಚಿಸಲು,—ದೂತರನ್ನು ಕೊಲ್ಲಲಾಗದು. ಅದರಲ್ಲಿಯೂ ಅವರು ಅಸ್ತ್ರಧಾರಿಗಳಲ್ಲ. ಬೇಕಾದ ಕಡೆಗೆ ತಿರುಗಿ ಹೋಗಲಿ!' ಎಂದನು. ಅವರು ಹಗೆಗಳ ಬಲಾಬಲಗಳನ್ನು ಚೆನ್ನಾಗಿ ಪರೀಕ್ಷಿಸಿದರು. ವಾನರರೊಳಗೆ ಏನಾದರೊಂದು ಭೇದಬುದ್ಧಿಯನ್ನು ಕಲ್ಪಿಸನೋಡಿದರು: ಏನೂ ಪ್ರಯೋಜನವಾಗಲಿಲ್ಲ. ಅದಕ್ಕಾಗಿಯೆ ಮರಳಿ ಬಂದವರೇ, ಅವರು ರಾವಣನಿಗೆ ಯುದ್ಧವು ಬೇಡವೆಂದು ತಿಳುಹಿದರು. ಅವರ ಮಾತನ್ನು ಕೇಳಿ, ಅವನು ಒಂದೇ ಬಾರಿ ಅಗ್ನಿಶರ್ಮನಾದನು! ಆದರೆ, ಸಮುದ್ರಕ್ಕೆ ಸೇತುಕಟ್ಟಿ, ಅಲ್ಲಿಯ ತನಕ ಬರ್ಬರರಾದ ವಾನರರೂ ಬಂದರಲ್ಲಾ ಎಂದು ಭಾವಿಸಿ, ಅವನ ವಜ್ರದಂತೆ ದೃಢವಾದ ಎದೆಯೂ ಒಂದು ಕ್ಷಣಕ್ಕೆ ನಡುಗಿತು. ಆದರೆ ಯಾರ ಸಾವು ಸಮೀಪವಾಗಿದೆಯೊ ಅವನು ಯಾರ ಮಾತನ್ನೂ ಕೇಳನು. ಅವನೇನು ಮಾಡಿದನು? ಒಬ್ಬ ಶಿಲ್ಪಿಯಿಂದ, ರಾಮನ ತಲೆಯಂತೆ ಒಂದು ತಲೆಯನ್ನೂ, ಅವನ ಧನುಸ್ಸಿ ನಂತಹ ಒಂದು ಧನುಸ್ಸನ್ನೂ ತಯಾರಿಸಿ ಸೀತಾದೇವಿಗೆ ಕಳುಹಿಕೊಟ್ಟನು. ಸೀತೆಯು ಈ ಕಪಟವನ್ನು ಬಲ್ಲಳೇ? ಅವಳು ಸಹಗಮನಮಾಡು

ವೆನೆಂದಳು. ಆಗ ವಿಭೀಷಣ ಪತ್ನಿಯಾದ ಸರಮೆಯು 'ರಾಮಚಂದ್ರನು ಇಲ್ಲೇ ಯುದ್ಧಕ್ಕಾಗಿ ಬಂದಿರುವನು; ಇನ್ನು ಮೂರು ನಾಲ್ಕು ದಿನಗಳೊಳಗೆ ನಿನ್ನನ್ನು ಸೆರೆಯಿಂದ ಬಿಡಿಸುವನು' ಎಂದು ಅವಳಿಗೆ ಧೈರ್ಯಕೊಟ್ಟು, ಅವಳ ಕಣ್ಣೀರನ್ನೊರಸಿದಳು.

ಇತ್ತ, ರಾವಣನು ಸಭೆಯಲ್ಲಿರುವನು. ದೊಡ್ಡ ಸಭೆ! ಸಭಿಕರೂ ಗರ್ವಿಷ್ಟರು! ಒಂದು ಮಾತಿಗೆ ಒಂದು ಸಲ ರಾಮಲಕ್ಷ್ಮಣರನ್ನು ಕೊಂದು ವಾನರರನ್ನು ಜಯಿಸುವವರು. ಅವರ ಉದ್ದುರುಟುತನಕ್ಕೆ ಮಿತಿಯೇ ಇಲ್ಲ. ಗೆದ್ದೆವೆಂದೆಣಿಸಿಯೆ ನಗುವರು. ರಾವಣನು ಇಂತಹರೆಲ್ಲರಿಗೆ ಎಷ್ಟು ಬಹುಮಾನಗಳನ್ನು ಕೊಟ್ಟನು! ಹೇಗೆ ಸಂಭಾವಿಸಿದನು! ಆಗಲೆ ಅಲ್ಲಿಗೆ ಅಂಗದನು ಬಂದು ಕಾಣಿಸಿಕೊಂಡನು. ಅವನನ್ನು ಕಂಡು ಎಲ್ಲರಿಗೂ ದಿಗ್ಭ್ರಮೆಯುಂಟಾಯಿತು. ಅಂಗದನು ರಾವಣನ ಸಿಂಹಾಸನವನ್ನೇರಿಯೇ ಕುಳಿತನು. ಅಷ್ಟರಲ್ಲೆ, ತಾನೆ ಯುದ್ಧಕ್ಕೆ ಮೊದಲಾಗಿ ನಡೆವೆನೆಂದು ರಾವಣಪುತ್ರನಾದ ಇಂದ್ರಜಿತುವು ಹೇಳುತಿದ್ದನಲ್ಲವೆ? ಅಂಗದನು ಅವನನ್ನು ಜರೆದನು. ರಾವಣನು ಅಂಗದನನ್ನು ದೂತನೆಂದು ಬಗೆಯದೆ ಹೊಡೆದನು. ಅವನು ರಾವಣನ ಮುಕುಟವನ್ನೆ ಕಿತ್ತುಕೊಂಡು ನಡೆದನು. ನಡೆದವನು ನಡೆದೇ ಹೋದನು. ರಾವಣನು ಇನ್ನಾದರೂ ಯುದ್ಧಕ್ಕೆ ಬಾರದಿರುವನೆ?

ಬಳಿಕ ರಾಕ್ಷಸ ಸೇನೆಗಳು ಹೂಂಕಾರದಿಂದ ಹೊರಟು ಇಂದ್ರಜಿತುವಿನ ಅಪ್ಪಣೆಯಂತೆ ಯುದ್ಧಕ್ಕೆ ಬಂದುವು. ಯುದ್ಧದಲ್ಲಿ ಇದಿರಾದ ಸೇನಾಬಲವೆಷ್ಟು?

**ಭಗಣದ ಲೆಕ್ಕಮುಂ, ಮಳೆಯನೀರ್ವನಿಯುಂ, ಪರಮಾಣು**
**ಸಂಖ್ಯೆಯುಂ,**
**ಗಗನದ ಸೀಮೆಯುಂ, ಜಳಧಿವೀಚಿಗಳಂ, ದೆಸೆಯಂತಮುಂ, ಪವ**
**ಣ್ಬಗಿಪನೆರಳ್ಪಲಂಗಳ ಮದದ್ವಿಪವಾಹವರೂಥಕಿಂಕರಾ**
**ಳಿಗಳ ಪವಣ್ಗಳಂ ಪವಣಿಸಲ್ಬಗೆದಪ್ಪನೆ ಗಾಂಪನಾಗನೇ?** |

ಇಂದ್ರಜಿತುವು ಇದಿರಾಗಿ ನಿಂದು ಯುದ್ಧಮಾಡದೆ ಮರೆಯಲ್ಲಿಂದಲೆ ನಾಗ ಪಾಶಗಳಿಂದ ರಾಮಲಕ್ಷ್ಮಣರನ್ನು ಬಿಗಿದನು. ಬಾಣಗಳ ಮಳೆಯನ್ನು ಸುರಿಸಿ ವಾನರರನ್ನು ಹಿಂಸೆಮಾಡಿದನು. ರಾಮಲಕ್ಷ್ಮಣರಿಬ್ಬರೂ ಮೂರ್ಛೆ ಹೋದರು.

ಅತ್ತ ಗರುಡನು ಬಂದು ನಾಗಪಾಶದಿಂದ ಮೂರ್ಛಿತರಾದ ರಾಮ ಲಕ್ಷ್ಮಣರನ್ನು ಎಬ್ಬಿಸಲು, ವಾನರರು ಕೋಲಾಹಲವನ್ನು ಮಾಡಿದರು. ಪುನಃ ಅವರು ಧನುರ್ಬಾಣಗಳನ್ನು ಹಿಡಿದುಕೊಂಡು ಯುದ್ಧವನ್ನು ಪ್ರಾರಂಭಿಸಿದರು. ಎಷ್ಟೋ ಮಂದಿ ಮಹಾಬಲರಾದ ರಾಕ್ಷಸರು ಮಡಿದರು. ರಾವಣನ ಸೇನಾಪತಿಗಳಾದ ಧೂಮ್ರಾಕ್ಷ, ವಜ್ರದಂಷ್ಟ್ರ, ಅಕಂಪನ, ಪ್ರಹಸ್ತ ಮೊದಲಾದವರು ಯುದ್ಧಕ್ಕೆ ಬಂದು ಒಬ್ಬೊಬ್ಬರಾಗಿ ಹನುಮಂತ, ಅಂಗದ, ನೀಲರಿಂದ ಮೃತರಾದರು.

ಸೇನಾಪತಿಗಳೇ ಮಡಿದ ಬಳಿಕ, ಇನ್ನು ರಾವಣನಲ್ಲದೆ ಇನ್ನಾರು ತಾನೆ ಯುದ್ಧ ನಡೆಸುವರು? ಅವನ ಬಾಣಗಳನ್ನು ತಡೆಯಲಾರದೆ ವಾನರರು ದಿಕ್ಕುಪಾಲಾದರು. ಆಗ ಲಕ್ಷ್ಮಣನು ರಾವಣನಿಗೆ ಇದಿರಾಗಲು, ರಾವಣನು ಅವನನ್ನು ಕೆಡೆಬಡೆದನಾದರೂ, ಹನುಮಂತನ ಹೊಡೆತಕ್ಕೆ ಬಿದ್ದು, ಅವನನ್ನು ತನ್ನ ರಥದಲ್ಲಿ ಎತ್ತಿಕೊಂಡು ನಡೆಯಲಾರದಾದನು. ಆಗಲೆ ರಾಮನು ಬಾಣಗಳನ್ನು ಬಿಡಲು, ಅವುಗಳ ಬೇನೆ ತಡೆಯಲಾರದೆ ರಾವಣನು ರಥವನ್ನು ಮರಳಿಸಿದನು. ಅವನು ಯುದ್ಧರಂಗಕ್ಕೆ ಬೆಂಗೊಟ್ಟ ಬಳಿಕವೂ ರಾಮನು ಬಾಣಗಳನ್ನು ತಡೆಯಲಿಲ್ಲ. ಅಷ್ಟರೊಳಗೆ ಲಕ್ಷ್ಮಣನು ಚೇತನಹೊಂದಿ ಯುದ್ಧಕ್ಕೆ ನಿಂತನು. ವಾನರರ ಕಿಲಕಿಲ ಧ್ವನಿಯಿಂದ ರಾವಣನು ಅಪಹಾಸ್ಯವನ್ನು ಸಹಿಸಲಾರದಾದನು. ಅವನನ್ನು ಅಪ ಹಾಸ್ಯವೂ ಬಾಣಗಳ ಬೇನೆಯೂ ಹೆಚ್ಚಾಗಿ ನೋಯಿಸಿದುವು. ಇನ್ನು ಅವನಿಂದಾಗದು. ಅವನು ತಡಮಾಡದೆ ಸೋದರನಾದ ಕುಂಭಕರ್ಣನನ್ನು ಎಬ್ಬಿಸಲು ಅಪ್ಪಣೆಯಿತ್ತನು.

ಈ ಮಹಾಶಯನು ನಿದ್ದೆಹೋದನೆಂದರೆ, ಆರು ತಿಂಗಳು ನಿದ್ದೆಯೆ! ನಿದ್ದೆಹೋಗುವುದಕ್ಕಾಗಿಯೆ ಇವನು ಬದುಕಿರುವನು! ಇವನ ಹದಿನಾಲ್ಕ ನೆಯ ನಿದ್ದೆ ಮುಗಿದಿದೆ, ಅಷ್ಟೆ. ಅವನನ್ನು ಹೇಗೂ ಎಬ್ಬಿಸಿದರು. ಏಳು

ವನೇ? ನೂರು ಜನರ ಆರ್ಭಟೆಗೂ ಇವನ ಗೊರಕೆಯೆ ಮಿಗಿಲು. ಇವನನ್ನು ಅಲ್ಲಾಡಿಸಿದರು, ಜಿಗಿದರು, ನೂಕಿದರು, ಹೊರಳಿಸಿದರು. ನೀರು ಕಲ್ಲುಗಳನ್ನು ಅವನ ಮೈಮೇಲೆ ಚೆಲ್ಲಿದರು. ಅವನ ಮೂಗುಗರ್ಜನೆ ನಿಲ್ಲದು; ಮತ್ತೆಯೋ ಎದ್ದು, ಕಣ್ದೆರೆದನು. ಎಬ್ಬಿಸ ಬಂದವರು ತಬ್ಬಿಬ್ಬಾಗಿ ಅಲ್ಲಿಂದ ಓಡಿದರು. ಅವನ ಹಸಿವಿಗೂ ನೀರಡಿಕೆಗೂ ಮೊದಲು ತೃಪ್ತಿ ಮಾಡಿಕೊಟ್ಟರು. ಸಮಯ ತಪ್ಪಿ ನಿದ್ದೆಯಿಂದೆದ್ದವನಲ್ಲವೇ ? ಕೋಪ ಗೊಂಡನು.

ರಾವಣನ ಸಭೆಗೆ ಬಂದನು. ಅದು ಸಭಾಸದಶೂನ್ಯ! ಕಾರಣ ವಿಚಾರಿಸಿದನು. ಶೂರ್ಪನಖೆಯು ದೂರಿಟ್ಟಂದಿನಿಂದ ಅಂದಿನ ವರೆಗಣ ವೃತ್ತಾಂತವನ್ನು ರಾವಣನು ತಮ್ಮನಿಗೆ ತಿಳಿಯಹೇಳಿದನು. ಕುಂಭಕರ್ಣನು ಜಡನಂತೆ ನಿದ್ರಾವಶನಾದ ರಕ್ಕಸನಾದರೂ, ನೀತಿಬಲ್ಲವನು. ಅಣ್ಣನನ್ನು ಕುರಿತು, ಕಳವಳಿಸುತ್ತ,—"ನಿನ್ನ ಈ ರೀತಿಯಿಂದ ಹಿತವಾಗುವಂತಿಲ್ಲ. ಕೂಳಿಗಾಗಿ ಹೊಗಳುವವರ ಮಾತನ್ನು ಕೇಳಿ ಇದುವರೆಗೆ ತಲೆದೂಗಿಯೆ, ಈಗ ತಲೆಕಳಚಿ ಬೀಳುವಂತೆ ಮಾಡಿಕೊಂಡಿರುವೆ. ನೀತಿಬಲ್ಲ ಆಪ್ತರು ನುಡಿದುದು ನಿನ್ನ ದುರ್ಮಾರ್ಗಕ್ಕೆ ಸರಿಹೋಗಲಿಲ್ಲ. ಅವರು ತೊಲಗಿದರು. ವಿಚಾರವಿದ್ದರೆ ಧರ್ಮವಿದೆ; ಸದ್ಧರ್ಮವನ್ನೆಸಾರಿ ಕೀರ್ತಿಯಿದೆ; ಕೀರ್ತಿಯನ್ನು ಹೊಂದಿಕೊಂಡು ಸಿರಿಯಿದೆ; ಅದನ್ನನುಸರಿಸಿಯೆ ಜಯವು. ವಿಚಾರವನ್ನು ಬಿಟ್ಟು ನಡೆದಂದೇ ಅಪಜಯವನ್ನೆ ಒಲಿಸಿಕೊಂಡಿರುವೆ. ಸೀತಾದೇವಿಯನ್ನು ಅವಳ ಪತಿದೇವನಿಗೇ ಒಪ್ಪಿಸಿಕೊಡುವುದು ಈಗಲಾದರೂ ಕೀರ್ತಿಕರವು" ಎಂದನು. ರಾವಣನು ಸಿಟ್ಟಾದನು.

'ಎಲವೊ! ನೀನೀಸಮರಭಾರವ
ಗೆಲುವೆಯೆಂದೆಬ್ಬಿಸಲು, ಬಳಿಕೀ
ಕಲಹಕಮ್ಮದೆ ನೀತಿಯಾಡುವೆ ಕಲಿತವಿದ್ಯೆಯನು!
ಬಲಿದ ನಿದ್ರಾಧಮನ ಇದಿರಲಿ
ನಿಲಿಸಿ ನುಡಿದುದೆ ತಪ್ಪು; ಮುನ್ನಿನ
ಬಳಕೆಯಲಿ ಸತ್ತಂತೆ ಕೆಡೆ, ಹೋಗೆ'ಂದು ಗರ್ಜಿಸಿದ.

ಇನ್ನು ಉಪಾಯವಿಲ್ಲೆಂದು ಕುಂಭಕರ್ಣನು ಯುದ್ಧಕ್ಕೆ ವೀಳೆಯ ಪಡೆದು ಆವೇಶದಿಂದ ರಣರಂಗಕ್ಕೆ ಇಳಿದನು. ಕುಂಭಕರ್ಣನಲ್ಲವೆ, ಅವನ ಕೈಗೆ

ಸಿಕ್ಕಿದರೆ ಮತ್ತೆ ಕಾಪಾಡುವವರಾರು? ಅವನ ವಿಕಾರವಾದ ದೇಹವನ್ನು ನೋಡಿಯೆ ವಾನರರು ಬೆಚ್ಚಿದರು, ಚೆದರಿದರು. ಅವನ ಆಯುಧಗಳಾವುವು? ಮರಗಳ ದೊಡ್ಡ ಗೆಲ್ಲುಗಳು. ಕೊಂಬೆಗಳನ್ನು ಸೆಳೆವನು, ಸೆಳೆದು ಬಡೆವನು. ಅವನು ಸುಗ್ರೀವನನ್ನು ಹಿಡಿದು ಲಂಕೆಗೆ ಕೊಂಡೊಯ್ಯಲು ಹೊರಟನು. ಸುಗ್ರೀವನೇನು ಮಾಡುವನು? ಕುಂಭಕರ್ಣನ ದೃಷ್ಟಿ ಸಮೀಪ. ಅವನು ಸುಗ್ರೀವನನ್ನು ನೋಡಲು ಅವನ ಮುಖದ ಬಳಿಗೆ ತನ್ನ ಮುಖವನ್ನು ತರಲು, ಸುಗ್ರೀವನು ಅವನ ಮೂಗು ಕಿವಿಗಳನ್ನು ಕಚ್ಚಿ ಹರಿದನು. ಬೇರೆ ತಡೆಯದೆ ಕುಂಭಕರ್ಣನು ಅವನನ್ನು ಬಿಟ್ಟನು. ರಾಮನು ಆಗ ಅವನ ಕೈಕಾಲುಗಳನ್ನು ಬಾಣಗಳಿಂದ ಕತ್ತರಿಸಿದನು. ಕುಂಭಕರ್ಣನು ಇದರಿಂದ ಸಾಯುವನೆ? ರಾಮನು ಆಗ ಅವನ ಕೊರಳಿಗೆ ಬಾಣವನ್ನು ಹೂಡಿದನು. ಕೊರಳು ತುಂಡಾಗಿ ಕೆಳಕ್ಕುರುಳಿತು. ವಾನರರು ಆ ರುಂಡವನ್ನು ಕೈಯಿಂದ ಕೈಗೆ ಹಾರಿಸುತ್ತ ಕೊನೆಗೆ ಸಮುದ್ರಕ್ಕೆ ಒಗೆದರು. ಲಂಕೆಯಲ್ಲಿ ಹಾಹಾಕಾರ!

ಅವನ ತರುವಾಯದಲ್ಲಿ ದೇವಾಂತಕ, ನರಾಂತಕ, ತ್ರಿಶಿರ, ಮಹೋದರ, ಮಹಾಪಾರ್ಶ್ವರೆಂಬ ವೀರರು ಒಬ್ಬೊಬ್ಬರಾಗಿ ಯುದ್ಧಕ್ಕೆ ಬಂದು ವಾನರರಿಂದ ಹತರಾದರು. ಇವರನಂತರ ಯುದ್ಧಕ್ಕಾಗಿ ಅತಿಕಾಯನೆ ಬಂದನು. ರಾವಣನ ಮಕ್ಕಳಲ್ಲಿ ಬುದ್ಧಿವಂತನೂ ವೀರನೂ ಇವನೇ. ಅವನು ಯುದ್ಧಕ್ಕೆ ಹೊರಡುತ್ತಲೆ ಲಂಕೆಯಲ್ಲಿ ಜಯಧ್ವನಿಯಾಯಿತು. ಅವನ ಅಸ್ತ್ರಕೌಶಲವನ್ನು ನೋಡಿ ವಾನರರು ಭಯಪಟ್ಟರು. ಅವನಿಗೆ ಲಕ್ಷ್ಮಣನೆ ಇದಿರಾದನು. ಅವನು ಬ್ರಹ್ಮಾಸ್ತ್ರವನ್ನು ಬಿಡಲು, ಆಗ ಅತಿಕಾಯನು ಮಡಿದನು.

ಇಂದ್ರಜಿತುವು ಈಗ ಇದೆರಡನೆಯ ಬಾರಿ ಯುದ್ಧಕ್ಕೆ ಮುಂದಾದನು. ಇದು ವರೆಗೆ ಅವನು ಒಂದು ಯಜ್ಞವನ್ನು ಮಾಡಿ ವಿಜಯಪಡೆಯಲು ವರ ಪಡೆದಿದ್ದನು. ಇನ್ನು ಅವನನ್ನು ಇದಿರಿಸುವವರಾರು? ಅವನ ಯುದ್ಧದಿಂದ ವಾನರರೆಲ್ಲರೂ ಕಳೆಗುಂದಿದರು. ಅವನು ಎಲ್ಲರೂ ಮೂರ್ಛೆ ಹೋಗುವಂತೆ ಮಾಡಿದನು. ರಾಮಲಕ್ಷ್ಮಣರೂ ಮೂರ್ಛಿತರಾದರು.

ಕವಿರಾಜನಾದ ಸುಷೇಣನು ಅವರಿಗೆ ಚಿಕಿತ್ಸೆಮಾಡಲು ಬಂದನು. ಬೇಕಾದ ಮೂಲಿಕೆಯನ್ನು ಕೈಲಾಸದಿಂದ ತರಬೇಕು. ಯಾರು ತರುವರು ? ಹನುಮಂತನು ತರಹೋದನು. ರಾತ್ರಿ ಬೆಳಗಾಗುವುದರೊಳಗೆ ಆ ಮೂಲಿಕೆಯನ್ನು ತಾರದಿದ್ದಲ್ಲಿ, ಅದು ಒಣಗಿ, ಅದರ ಪ್ರಯೋಜನವು ಇಲ್ಲದಂತಾಗುವುದು.

ಮೃತಸಂಜೀವಿನಿಯನ್ನು ಹನುಮಂತನು ತರಲು ಹೋದನು. ಹಿಮಾಲಯಕ್ಕೆ ಬಂದು ಹುಡುಕಿದನು. ಅದಾವುದೊ ? ರಾತ್ರಿ ಕಳೆವುದಲ್ಲವೆ ? ಔಷಧಗಳು ಬೆಳೆದಷ್ಟು ಬೆಟ್ಟವನ್ನೆ ಹೊತ್ತುಕೊಂಡು ಹನುಮಂತನು ಬಂದನು. ಸುಷೇಣನೆ ಹುಡುಕಲಿ! ಸುಷೇಣನು ಅದನ್ನು ಬೇರೆ ತೆಗೆದು, ಎಲ್ಲರ ಮೂಗುಗಳ ಬಳಿ ಹಿಡಿದನು. ಅದರ ಗಾಳಿ ಬಡೆದುದೇ ಎಲ್ಲರೂ ಎದ್ದುಕೊಂಡರು. ರಾಮಲಕ್ಷ್ಮಣರೂ ಎದ್ದರು. ಯುದ್ಧದ ಆಯಾಸವೇ ಅವರಿಗೆ ತಿಳಿದಿರಲಿಲ್ಲ.

ಈ ವೃತ್ತಾಂತವನ್ನು ರಾವಣನು ಕೇಳಿ ಆಶ್ಚರ್ಯಪಟ್ಟನು ಎಷ್ಟೋ ಬಾರಿ,. ವಾನರರೂ ರಾಮಲಕ್ಷ್ಮಣರೂ ಮಡಿದರು! ಆದರೆ ಪುನಃ ಎದ್ದರು. ಇನ್ನು ಹೀಗೇ ಆಗುವುದಾದರೆ, ಲಂಕೆಯನ್ನು ಕಾಪಾಡಲಾಗುವುದೆಂತು ? ಇನ್ನು ಯುದ್ಧವೇಕೆ ? ಲಂಕೆಯ ಎಲ್ಲ ದ್ವಾರಗಳನ್ನು ಮುಚ್ಚಿರೆಂದು ಚಾಕರರಿಗೆ ಅಪ್ಪಣೆ ಕೊಟ್ಟನು. ಹಾಗೆಯೆ ಮಾಡಲಾಯಿತು. ಹೊರಗಿದ್ದವರು ಒಳಕ್ಕೆ ಬರಲಾರರು; ಒಳಗಿದ್ದವರು ಅಲ್ಲೇ ಉಳಿಯಬೇಕಾಯಿತು. ಆ ದ್ವಾರಗಳನ್ನು ಒಡೆವುದೂ ಸಾಮಾನ್ಯವೆ? ರಾಮಲಕ್ಷ್ಮಣರು ಇನ್ನೇನು ಮಾಡುವುದೆಂದು ಭಾವಿಸಿದರು. ವಾನರಸಭೆಯು ಸೇರಿತು. ವಾನರರು ಲಂಕೆಯೊಳಗೆ ನುಗ್ಗಿ ಮನೆಮನೆಗೆ ಬೆಂಕಿ ಹತ್ತಿಸುವುದೆಂದು ನಿರ್ಧಾರವಾಯಿತು. ವಾನರರು ನಗರದ ಗೋಡೆಗಳನ್ನು ಹತ್ತಿದರು. ಸಿಕ್ಕಿದ ರಾಕ್ಷಸರ ದವಡೆಗೆ ಏಟುಕೊಟ್ಟರು. ರಾಕ್ಷಸರು ಎಲ್ಲಿಗೆ ಓಡುವರು? ಹೊರಗೆ ಬರಲು ಉಪಾಯವಿಲ್ಲ. ಸಂಜೆಯಾಯಿತು. ವಾನರರು ಮನೆಮನೆಗೆ ಬೆಂಕಿಯಿಟ್ಟರು. ಇನ್ನು ಪ್ರಾಣರಕ್ಷಣೆಗೆ ಉಪಾಯವೇನಿದೆ? ಬೆಂಕಿ ಹಬ್ಬಿತು. ಚಿನ್ನದ ಲಂಕೆ ಸುಟ್ಟು ಬೂದಿಯ ರಾಶಿಯಾಯಿತು! ಸೈನ್ಯವೆಷ್ಟು, ಮಂದಿಯೆಷ್ಟು! ಸುಟ್ಟೇ ಹೋಯಿತು! ಮನೆಮಾರು ಜಾನುವಾರು ಭಸ್ಮವಾಯಿತು.

ರಾವಣನು ಇದನ್ನು ನೋಡಿ ಕಂಗಾಲಾದನು. ಇನ್ನು ಬಾಗಿ ಲಿಕ್ಕಿಯೂ ಉಪಾಯವಿಲ್ಲ. ದ್ವಾರಗಳನ್ನು ತೆರೆಯಿಸಿ 'ಯುದ್ಧವಾಗಲಿ' ಎಂದನು. ಕುಂಭಕರ್ಣನ ಇಬ್ಬರು ಪುತ್ರರು ಕುಂಭನಿಕುಂಭರೆಂಬವರು ಯುದ್ಧಕ್ಕೆ ನಿಂದರು. ಹನುಮಂತನೆ ಅವರನ್ನು ಕೊಂದನು. ಅವರ ತರುವಾಯ ಮಕರಾಕ್ಷನು ಮುಂದಕ್ಕೆ ಬಂದನು. ರಾಮಬಾಣಕ್ಕೆ ಅವನು ಬಲಿಯಾದನು. ನಂತರ ವಿಭೀಷಣಪುತ್ರನಾದ ತರಣೀಸೇನನು ಯುದ್ಧಕ್ಕೆ ಇಳಿದನು. ಅವನು ಭಯಂಕರ ಯುದ್ಧವನ್ನು ಮಾಡಿದನು. ರಾಮಲಕ್ಷ್ಮಣರು ಅವನ ಪ್ರತಾಪಕ್ಕೆ ದಿಗಿಲುಹೊಂದಿದರು. ವಾನರರು ಪಲಾಯನ ಮಾಡಿದರು. ರಾಮನೂ ಸೋಲುವನೊ ಎಂಬಂತಾಯಿತು. ಬ್ರಹ್ಮಾಸ್ತ್ರದಿಂದಲ್ಲದೆ ಇವನನ್ನು ಗೆಲ್ಲುವುದು ಅಸಾಧ್ಯವೆಂದು ವಿಭೀಷಣನೆಂದನು. ತಂದೆಯೇ ಮಗನ ಮರಣೋಪಾಯವನ್ನು ಹೇಳಿದನು! ಅವನ ಯುದ್ಧಕ್ಕೆ ರಾಮನು ಮೆಚ್ಚಿದನು; ವಿಭೀಷಣನು ತಾನು ಧನ್ಯನೆನಿಸಿಕೊಂಡನು. ಬ್ರಹ್ಮಾಸ್ತ್ರವೇ ಅವನನ್ನು ಇಕ್ಕಡಿಯಾಗಿ ತುಂಡಿಸಿತು. ವಿಭೀಷಣನಿಗೆ ಆಗ ಪುತ್ರಶೋಕವುಂಟಾಯಿತು. ಅವನು ವಿಭೀಷಣನ ಮಗನೆಂದಾದರೂ ಅದು ವರೆಗೆ ರಾಮಲಕ್ಷ್ಮಣರಿಗೆ ತಿಳಿದಿರಲಿಲ್ಲ. ವಿಭೀಷಣನನ್ನು ಶಾಂತಗೊಳಿಸುವುದು ಬಲು ಕಠಿನವಾಯಿತು. ಅವನ ನಂತರ ವೀರಬಾಹುವು ಯುದ್ಧಕ್ಕೆ ಬರಲು, ಅವನನ್ನು ವೈಷ್ಣವಾಸ್ತ್ರದಿಂದ ಕೊಲ್ಲಬೇಕಾಯಿತು.

ಇನ್ನೊಮ್ಮೆ ಇಂದ್ರಜಿತುವೇ ಯುದ್ಧಸನ್ನದ್ಧನಾದನು. ಅವನೇ ರಾವಣನ ಜ್ಯೇಷ್ಠಪುತ್ರನು. ಅತಿ ಪ್ರೀತಿಯ ಮಗನು. ಪಡುವಣ ದ್ವಾರಕ್ಕೆ ಅವನು ಸೈನ್ಯಗಳೊಡನೆ ಬಂದನು. ಅಲ್ಲಿನ ವಾನರ ಸೇನೆಗಳು ನೆಲೆಯಿಲ್ಲದೆ ಓಡಿದುವು. ಇಂದ್ರಜಿತುವು ಸೀತೆಯ ಒಂದು ಪ್ರತಿಮೆಯನ್ನು ಉಂಟು ಮಾಡಿ, ಅದನ್ನು ಎತ್ತರವಾಗಿ ರಾಮನಿಗೆ ತೋರುವಂತೆ ನಿಲ್ಲಿಸಿದನು. ಎಲ್ಲರೂ ಅತ್ತರು. ಇಂದ್ರಜಿತುವು ಎಲ್ಲರೂ ನೋಡುತ್ತಿದ್ದಂತೆ ಈ ಮಾಯಾ ಸೀತೆಯನ್ನು ಕಡಿದುಹಾಕಿದನು. ರಾಮಲಕ್ಷ್ಮಣರು ಸೀತೆ ಸತ್ತಳೆಂದು ದುಃಖಗೊಂಡು ಎದೆಯೊಡೆದು ಮಡಿದರೆ, ಅಥವಾ ಹಿಂತೆರಳಿದರೆ, ಸುಲಭವಾಗಿ ರಾಕ್ಷಸರಿಗೆ ಜಯವಾಗುವುದಲ್ಲವೆ? ವಾನರರೂ ಹಾಹಾಕಾರವನ್ನೆತ್ತಿದರು! ರಾಮಲಕ್ಷ್ಮಣರು ಯುದ್ಧಮಾಡಿದರು! ಈ ಮಾಯಾ ಸೀತೆಯ

ವೃತ್ತಾಂತವನ್ನು ವಿಭೀಷಣನೆ ತಿಳುಹಿದನು. ಆದರೆ ಅವನನ್ನು ಜಾಂಬವಾಂಗದರು ನಂಬುವರೆ! ಹನುಮಂತನನ್ನು ಪುನಃ ಅಶೋಕವನಕ್ಕೆ ಕಳುಹಲಾಯಿತು. ಅಲ್ಲಿ ಸೀತಾದೇವಿಯು ಎಂದಿನಂತೆ ರಾಮಧ್ಯಾನವನ್ನು ಮಾಡುತಲಿದ್ದಳು. ಇದನ್ನು ತಿಳಿದು ವಿಭೀಷಣನು—'ತಾವೆಲ್ಲರು ಶೋಕಮಗ್ನರಾಗಿರುವಾಗ ಇಂದ್ರಜಿತುವು ನಿರ್ವಿಘ್ನವಾಗಿ ನಿಕುಂಭಿಲಾ ಯಜ್ಞವನ್ನು ಮಾಡಲು ಈ ಮಾಯೆಯನ್ನು ಹೂಡಿದನು. ಈ ಯಜ್ಞಕ್ಕೆ ಪೂರ್ಣಾಹುತಿಯನ್ನು ಕೊಟ್ಟು ಅವನು ಯುದ್ಧಕ್ಕೆ ಬಂದರೆ ಅವನಿಗೆ ಜಯವಾಗುವುದು ನಿಶ್ಚಯವು. ಈಗಲೆ ಅವನ ಯಜ್ಞವನ್ನು ಭಂಗಗೊಳಿಸಿದಲ್ಲದೆ ಉಪಾಯವಿಲ್ಲ. ವೃಥಾಶೋಕವೇಕೆ?' ಎಂದು ರಾಮಲಕ್ಷ್ಮಣರಿಗೆ ಬಿನ್ನಹ ಮಾಡಿದನು.

ಕೂಡಲೇ ಅಸಂಖ್ಯವಾನರರೊಡನೆ ಲಕ್ಷ್ಮಣನು ಯಜ್ಞಸ್ಥಳಕ್ಕೆ ನಡೆದನು. ವಾನರರು ನಾನಾ ವಿಧವಾಗಿ ಕಲ್ಲುಮರಗಳನ್ನೆಸೆದು ಯಜ್ಞಕುಂಡದಲ್ಲಿನ ಬೆಂಕಿಯನ್ನು ನಂದಿಸಿದರು. ಅವನಿಗಾಗಿ ಆಗಲೆ ಒಂದು ದಿವ್ಯವಾದ ವಿಜಯರಥವು ಮೇಲೇರಿ ಬರುತಿದ್ದಿತು. ಅದು ಅಲ್ಲಲ್ಲಿಗೇ ಮಾಯವಾಯಿತು. ಇಂದ್ರಜಿತುವು ಸಿಟ್ಟಾಗಿ, ಯಜ್ಞವನ್ನು ಅಲ್ಲೇ ಬಿಟ್ಟು, ಹೊರಬಿದ್ದು, ಭಯಂಕರ ಕಾದಾಟಕ್ಕೆ ಪ್ರಾರಂಭಿಸಿದನು. ಯಾರ ಕಣ್ಣಿಗೂ ಕಾಣದಂತೆ, ಹೊಗೆ ಮೋಡವನ್ನೆಬ್ಬಿಸಿ ಮರೆಯಲ್ಲಿ ನಿಂದು ಯುದ್ಧಮಾಡುವಂತಹ ಚಾತುರ್ಯವು ಇಂದ್ರಜಿತುವಿನದಾಗಿದ್ದಿತು. ಬಹಳ ಕಾದಾಟವಾದ ಬಳಿಕ ಲಕ್ಷ್ಮಣನು ಅವನ ಮೇಲೆ ಬ್ರಹ್ಮಾಸ್ತ್ರವನ್ನೆಸೆದನು. ಅದು ಇಂದ್ರಜಿತುವನ್ನು ಕೊಂದಿಕ್ಕಿತು. ವಾನರರು ಜಯಧ್ವನಿ ಮಾಡಿ, ಇಂದ್ರಜಿತುವಿನ ರುಂಡವನ್ನು ಕಿತ್ತುಕೊಂಡರು. ಲಕ್ಷ್ಮಣನ ಮೈಯೆಲ್ಲ ಗಾಯವೊಡೆದಿದ್ದಿತು. ಸುಷೇಣನು ಅವನಿಗೆ ಯೋಗ್ಯ ಉಪಚಾರ ಮಾಡಿದನು.

ಇಂದ್ರಜಿತುವು ಮಡಿದೊಡನೆ, ಅವನ ಪತ್ನಿಯಾದ ಸುಲೋಚನೆಯೂ ಸತಿಯಂತೆ ಅಲಂಕೃತೆಯಾಗಿ, ರಾವಣನಿಂದ ಹೇಗೂ ಅಪ್ಪಣೆಯನ್ನು ಬೇಡಿ, ರಾಮನಿಂದ ರುಂಡವನ್ನು ಪಡೆದು ಸಹಗಮನ ಮಾಡಿದಳು. ಈ ದೃಶ್ಯದಿಂದ ರಾವಣನು ಮನಸ್ಸಿನಲ್ಲಿ ತುಂಬ ಕರಗಿದನು.

ರಾವಣನ ಪಕ್ಷವಾಗಿ ಇನ್ನು ಯುದ್ಧಮಾಡಲು, ಲಂಕಾಪುರದಲ್ಲಿ ಮಹಾವೀರರು ಯಾರೂ ಉಳಿಯಲಿಲ್ಲ. ಇಂದ್ರಜಿತುವು ಮಡಿದನೆಂದು ಮಾತ್ರವೇ ಅಲ್ಲದೆ, ಅವನ ಮರಣಕ್ಕೆ ವಿಭೀಷಣನು ಕಾರಣನಾದನೆಂದೂ ತಿಳಿದು ಅವನನ್ನು ಕೊಲ್ಲದೆ ನಿರ್ವಾಹವಿಲ್ಲೆಂದು, ರಾವಣನು ಖಡ್ಗವನ್ನು ಹಿಡಿದುಕೊಂಡು ಯುದ್ಧಕ್ಕೆ ಬಂದೇ ಬಂದನು. ಅವನ ಇದಿರು ಯಾವ ವಾನರರೂ ನಿಲ್ಲಲಾರದಾದರು. ಆಗಲೆ ಅವನು ಮಹತ್ತಾದ ಒಂದು ಶಕ್ತಿಯನ್ನು ವಿಭೀಷಣನ ಮೇಲೆ ಪ್ರಯೋಗಿಸುವನೆನ್ನಲು, ಅದನ್ನು ತಡೆಯುವುದಕ್ಕೆ ಲಕ್ಷ್ಮಣನು ರಾವಣನನ್ನು ಬಾಣಗಳಿಂದ ಮುಚ್ಚಿದನು. ಇದರ ಪರಿಣಾಮವಾಗಿ, ಅವನು ಆ ಶಕ್ತಿಯನ್ನು ಲಕ್ಷ್ಮಣನ ಮೇಲೆಯೆ ಎಸೆದನು. ಅದು ಲಕ್ಷ್ಮಣನನ್ನು ಬಡೆದು ಕೆಡೆಬೀಳಿಸಿತು. ವಾನರರು ಗೋಳಿಟ್ಟರು. ಆಗ ರಾಮನೇ ಮುಂದಕ್ಕೆ ಬಂದು ರಾವಣನನ್ನು ಆಕ್ರಮಿಸಿದನು. ಆಗ ರಾವಣನು ಬೆನ್ನುತೋರಿಸಿ ರಣರಂಗದಿಂದ ಲಂಕೆಗೆ ಓಡಿದನು. ಇತ್ತ ಸುಷೇಣನು ಲಕ್ಷ್ಮಣನನ್ನು ಪ್ರಜ್ಞೆಗೆ ತಂದನು.

ಅಷ್ಟರಲ್ಲಿ ರಾವಣನು ಅದೇ ಸಮಯವೆಂದು ಸೀತೆಯನ್ನು ಕೊಲ್ಲುವುದಕ್ಕಾಗಿ, ಅಥವಾ ವಶಗೊಳಿಸುವುದಕ್ಕಾಗಿ ಅಶೋಕವನಕ್ಕೆ ತೆರಳಿದನು. ಮಂಡೋದರಿಯು ಅವನೆತ್ತಿದ ಖಡ್ಗಕ್ಕೆ ತಾನೇ ತಲೆಕೊಟ್ಟುದರಿಂದ, ಅವನು ಅಲ್ಲಿಂದ ಹಿಂದಕ್ಕೆ ಬಂದನು. ಬರುವಾಗಲೇ 'ಜಯರಾಮ!' ಎಂಬ ಮಹಾಧ್ವನಿ! ಲಕ್ಷ್ಮಣನು ಜೀವಿಸಿರುವನೆಂದಾಯಿತು. ವಾನರರ ಕಿಲಕಿಲ ಧ್ವನಿ ಕೇಳದಿರಲಾಗುವುದೆ? ರಾವಣನು ಇನ್ನೊಮ್ಮೆ ತಾನೆ ಯುದ್ಧಕ್ಕೆ ಬರುವನೆಂದಾಯಿತು. ಆದರೆ ಅದರಷ್ಟರಲ್ಲಿ, ಅವನಿಗೆ ಮಗನಾಗಿ ಪಾತಾಳದಲ್ಲಿದ್ದ ಮಹಿರಾವಣನ ನೆನಪಾಗಿ, ಅವನನ್ನು ಯುದ್ಧಕ್ಕೆ ಬರಲು ಆಜ್ಞಾಪಿಸಿದನು.

ಈ ವೃತ್ತಾಂತವು ವಾನರಸೇನೆಗಳಿಗೂ ತಿಳಿಯಬರಲು ಮಾಯಾವಿದ್ಯಾಪಾರಾಂಗತನಾದ ಮಹಿರಾವಣನಿಂದ ಕಾಪಾಡಿಕೊಳ್ಳುವುದಕ್ಕಾಗಿ ಎಲ್ಲರೂ ಸಾವಧಾನವಾಗಿರಬೇಕೆಂದು ನಿಶ್ಚಯವಾಯಿತು. ಕಪಿನಾಯಕರೆಲ್ಲರೂ ಶಿಬಿರವನ್ನು ಕಾಪಾಡುವುದಕ್ಕೆ ನಾನಾ ವ್ಯೂಹಗಳನ್ನು ರಚಿಸಿ ಪವಡಿಸಿದರು. ವಿಭೀಷಣನು ಮಹಿರಾವಣನನ್ನು ಚೆನ್ನಾಗಿ ಬಲ್ಲನು.

ಅವನು ನಾಲ್ಕೂ ಕಡೆಯ ಪಹರೆಯವರ ಕಾವಲನ್ನು ನೋಡುತ್ತಲೇ ಇರುವ ಉದ್ಯೋಗವನ್ನು ವಹಿಸಿಕೊಂಡನು. ನಡುರಾತ್ರಿ ಮೀರಿತು. ಮಹಿರಾವಣನು ಆಗಲೆ ಪಾತಾಳದಿಂದ ರಾಮಲಕ್ಷ್ಮಣರು ಮಲಗಿದ್ದಲ್ಲಿಗೇ ಒಂದು ಸುರಂಗವನ್ನು ತೋಡಿಸಿದನು. ಅವನು ತಾನು ದಶರಥನ ಹಾಗೆ ವೇಷವನ್ನು ಹಾಕಿಕೊಂಡು ಒಂದು ದ್ವಾರದ ಬಳಿಗೆ ಬರಲು, ಅಲ್ಲಿಂದ ರಾಮಭಕ್ತ ಹನುಮಂತನು ಅವನನ್ನು ಒಳನುಗ್ಗಲು ಬಿಡಲಿಲ್ಲ; ಮತ್ತೊಂದು ಧ್ವಾರದಲ್ಲಿ ಭರತನಂತೆ ವೇಷಧರಿಸಿ ಹೋಗಲು ಯತ್ನಿಸಿದನು, ಅಲ್ಲಿಯೂ ಹನುಮಂತನು ನುಗ್ಗಗೊಡನು. ವಿಭೀಷಣನು ಬಾರದೆ ಯಾರನ್ನೂ ಒಳಬಿಡಲಾಗುವುದಿಲ್ಲೆಂದನು. ಕೌಸಲ್ಯೆಯಂತೆ ಬಂದನು; ಉತ್ತರವು ಅದೇ. ಕೊನೆಗೆ ವಿಭೀಷಣನಾಗಿಯೇ ಬಂದನು. ಬಂದು 'ಬಹಳ ಸಾವಧಾನವಾಗಿರು; ರಾಮಲಕ್ಷ್ಮಣರನ್ನು ನೋಡಿ, ಜಾಗ್ರತೆ ಹೇಳಿ ಬರುವೆನು. ಯಾರೂ ನನ್ನಂತೆ ಬಂದರೂ ಒಳಕ್ಕೆ ಬಿಡದಿರು' ಎಂದು ಹನುಮಂತನಿಗೆ ಹೇಳಿ ಒಳಕ್ಕೆ ನಡೆದನು. ಸುಗ್ರೀವನ ತೊಡೆಯ ಮೇಲೆ ತಲೆಯಿಟ್ಟು ರಾಮನೂ, ಅಂಗದನ ರಕ್ಷಣೆಯಲ್ಲಿ ಲಕ್ಷ್ಮಣನೂ ಮಲಗಿದ್ದರು. ಸುಗ್ರೀವನು ನೋಡಿದನು, ಅವನು ವಿಭೀಷಣನು. ವಾನರರನ್ನು ಮೌನವಾಗಿರ ಹೇಳಿ, ರಾಮಲಕ್ಷ್ಮಣರನ್ನು ಮೆಲ್ಲನೆ ಸುರಂಗಮಾರ್ಗವಾಗಿ ಪಾತಾಳಕ್ಕೆ ತಂದನು. ಅಲ್ಲಿ ಅವರನ್ನು ರಾಕ್ಷಸರ ಸೆರೆಯಲ್ಲಿಟ್ಟನು. ಅವರು ಒಂದನ್ನೂ ತಿಳಿಯರು.

ಇಷ್ಟರಲ್ಲಿ ವಿಭೀಷಣನೆ ಹನುಮಂತನಿದ್ದ ಬಾಗಿಲಿಗೆ ಬಂದನು. ಅವನಿಗೆ ಆಶ್ಚರ್ಯವಾಯಿತು. ಈಗಲೆ ಒಳಹೋದ ವಿಭೀಷಣನು ಅಷ್ಟರಲ್ಲಿ ಇದಿರು ಬಂದನೆಂಬುದು ಹೇಗೆ? ಮಹಿರಾವಣನು ಹೀಗೆ ಮೋಸ ಮಾಡಿದನೆಂದು ವಿಭೀಷಣನು ತಿಳಿದನು. ಇವನೇ ಮಾಯಾವಿಭೀಷಣನೆಂದು ಹನುಮಂತನು ಭಾವಿಸಿದನು. ಕೂಡಲೆ ಹನುಮಂತನು ಬಾಯಿಗೆ ಬಂದಂತೆ ವಿಭೀಷಣನನ್ನು ಜರೆದಾಡಿದನು. ವಿಭೀಷಣನು ಗಂಭೀರ ಭಾವದಿಂದ ನಿಂತನು. 'ನಾನು ರಾಮಮಿತ್ರನಲ್ಲದಿದ್ದಲ್ಲಿ ಗೋವಧೆ ಬ್ರಹ್ಮಹತ್ಯ ಮೊದಲಾದ ಪಾಪಗಳು ನನ್ನ ಮೇಲೆ ಬರಲಿ! ನಾನು ರಾಮಮಿತ್ರನಲ್ಲದಿದ್ದಲ್ಲಿ ಇಂದ್ರಜಿತುವಿನ ಯಜ್ಞವನ್ನು ನೀವು ಧ್ವಂಸಮಾಡುತಿದ್ದಿರೇ? ನನ್ನ ಮಗನನ್ನೆ ಕೊಲ್ಲುವ ಉಪಾಯವನ್ನು ನಾನು ಹೇಳಿಕೊಡುತಿದ್ದೆನೇ?

ಯಾವ ವೇಷದಿಂದಲಾದರೂ ಒಳನುಗ್ಗಲಾಗುವುದಿಲ್ಲೆಂದು ಮಹಿರಾವಣನು ಈ ರೀತಿ ನನ್ನ ವೇಷದಿಂದ ಒಳಹೋಗುವಂತೆ ಮಾಡಿದ ಕಪಟತನಕ್ಕೆ ನೀವು ಮರುಳಾಗಿ ಎಲ್ಲವನ್ನೂ ಕೆಡಿಸಿದಿರಿ' ಎನ್ನಲು, ಹನುಮಂತನು ನಾಚಿಕೊಂಡನು.

ಮಹಿರಾವಣನು ಹನುಮಂತನಿಗೆ ಮೋಸವನ್ನು ಮಾಡಿದನಲ್ಲವೆ? ಅವನು ವಿಭೀಷಣನೊಡನೆ ಪಾಳೆಯವನ್ನು ಹೊಕ್ಕು ನೋಡಿದರೆ, ಎಲ್ಲರೂ ನಿದ್ದೆಹೋಗಿರುವರು. ರಾಮಲಕ್ಷ್ಮಣರೇ ಅಲ್ಲಿಲ್ಲ. ಇವರಿಬ್ಬರೂ ಗೋಳಾಡಿದರು. ಈ ಗೋಳಾಟಕ್ಕೆ ಎಲ್ಲರೂ ಎಚ್ಚತ್ತರು. ಸಂಗತಿಯನ್ನು ತಿಳಿದು ಅವರೂ ಅತ್ತುಕೊಂಡರು. ಎಲ್ಲರೂ ಅತ್ತು ಮಾಡುವುದೇನು? ಹಾಹಾಕಾರವು ಆಕಾಶಕ್ಕೇರಿತು. ಜಾಂಬವಂತನು ಹನುಮಂತನೇ ರಾಮಲಕ್ಷ್ಮಣರನ್ನು ಹುಡುಕಿ ತರಬೇಕೆಂದನು. ಹನುಮಂತನು ಅತ್ತಿತ್ತ ಹುಡುಕುವಾಗಲೆ ಪಾತಾಳದ ಕಡೆಗೆ ಅದೊಂದು ಸುರಂಗವು ತೋರಬಂದಿತು. ಅವನು ಅದರ ಉದ್ದೇಶವನ್ನು ತಿಳಿದುಕೊಂಡನು. ಹನುಮಂತನು ಕೂಡಲೆ ಸುರಂಗಮಾರ್ಗವಾಗಿ ಪಾತಾಳಕ್ಕಿಳಿದನು. ಅಲ್ಲಿ ಸೂರ್ಯೋದಯವಾಗಿದೆ. ಅದೆಂತಹ ಮನೋಹರ ನಗರವು! ಭೋಗವತೀ ಗಂಗಾನದಿಯು ಹರಿಯುತ್ತಲಿದೆ. ಅದರ ತೀರದಲ್ಲೆಲ್ಲ ಉಪವನಗಳು. ಅಲ್ಲಿನ ನಾಗಕನ್ಯೆಯರೂ ಯಕ್ಷಿಣಿಯರೂ ತುಂಬ ಚೆಲುವೆಯರೇ.

ಹನುಮಂತನು ರಾಮಲಕ್ಷ್ಮಣರಿಗಾಗಿ ಎತ್ತೆತ್ತಲೂ ಹುಡುಕಿದನು. ಇಲ್ಲ, ಅವರ ಸುಳಿವೇ ಇಲ್ಲ. ಹಿಂದುಗಡೆಯಲ್ಲಿಯೆ, ಮಹಾಮಾಯೆಯ ಪೂಜೆ! ನರಬಲಿಯಾಗುವುದಂತೆ! ಇಬ್ಬರು ಸುಂದರಪುರುಷರನ್ನು ದೇವಿಗೆ ಬಲಿಯಾಗಿ ಕಡಿಯುವರಂತೆ! ಹನುಮಂತನು ಎಲ್ಲವನ್ನೂ ತಿಳಿದುಕೊಂಡನು. ಮೆಲ್ಲನೆ ವೇಷಮರೆಸಿಕೊಂಡು ರಾಮಲಕ್ಷ್ಮಣರಿದ್ದಲ್ಲಿಗೇ ಹೋಗಿ, ಅವರಿಗೆ ಎಲ್ಲ ವೃತ್ತಾಂತವನ್ನೂ ವಿವರಿಸಿದನು. ಅವರೇನು ಮಾಡುವರು? ಧನುರ್ಬಾಣಗಳಿಲ್ಲ; ಹೇಗೆ ಸಾಹಸಮಾಡುವರು? ಹನುಮಂತನು ಒಂದು ಉಪಾಯವನ್ನು ಭಾವಿಸಿ, ರಾಮಲಕ್ಷ್ಮಣರಿಗೆ ಅದನ್ನು ಸೂಚಿಸಿದನು. ಅದಕ್ಕಾಗಿ ದೇವಾಲಯದೊಳಗೆ ಮೊದಲಾಗಿ ನಡೆದು, ವಿಗ್ರಹದ ಮರೆಯಲ್ಲಿ ಅಡಗಿಕೊಂಡನು.

ಬಲಿಯ ಹೊತ್ತು ಬಂದಿತು. ರಾಮಲಕ್ಷ್ಮಣರನ್ನು ದೇವೀಮಂದಿರಕ್ಕೆ ಒಯ್ದು, ದೇವಿಗೆ ನಮಸ್ಕಾರವನ್ನು ಹಾಕಲು ಮಹಿರಾವಣನ ಅಪ್ಪಣೆ ಯಾಯಿತು. ನಾವು ಅರಸು ಮಕ್ಕಳು, ನಮಗೆ ನಮಸ್ಕಾರ ಹಾಕಲು ತಿಳಿಯದು. ನೀನೆ ಒಮ್ಮೆ ನಮಸ್ಕಾರ ಮಾಡಿ ತೋರಿಸೆಂದು ಅವರು ಅವನಿಗೆ ಎಂದರು. ಮಹಿರಾವಣನು ಸಾಷ್ಟಾಂಗ ನಮಸ್ಕಾರವನ್ನು ಮಾಡಿ ತೋರಿಸುವೆನೆಂದು ಉದ್ದಂಡವಾಗಿ ಬೀಳಲು, ಆಗಲೆ ಹನುಮಂತನು ಪ್ರತಿಮೆಯ ಹಿಂದಣಿಂದ, ವಿಗ್ರಹದ ಕೈಯ ಖಡ್ಗವನ್ನು ಹಿಡಿದು ಬಂದು, ಅವನ ತಲೆಯನ್ನೆ ಛೇದಿಸಿದನು. ಇದನ್ನು ನೋಡಿಯೆ ರಾಕ್ಷಸರು ಯಾವ ಕಡೆಗೆ ಹೇಗೆ ಪಲಾಯನ ಮಾಡಿದರೊ, ಅವರ ಪತ್ತೆಯೇ ಸಿಗದಾಯಿತು. ಮಹಿರಾವಣನ ಹೆಂಡತಿಯು ಇದಕ್ಕಾಗಿ ಧನುರ್ಬಾಣಗಳನ್ನು ಹಿಡಿದು ರಾಮಲಕ್ಷ್ಮಣರೊಡನೆ ಯುದ್ಧಕ್ಕೆ ನಿಂತಳು. ಹನುಮಂತನು ಅವಳನ್ನೂ ಕೊಂದನು; ಅವಳ ಸೈನ್ಯವನ್ನೂ ಮುರಿದನು. ಅನಂತರ ಹನುಮಂತನು ರಾಮಲಕ್ಷ್ಮಣರನ್ನು ತನ್ನ ಹೆಗಲ ಮೇಲೇರಿಸಿಕೊಂಡು, ಲಂಕೆಗೆ ಮರಳಿ ಬಂದನು. ವಾನರರು ಆಗ ಜಯಧ್ವನಿ ಮಾಡಿದರು.

ರಾವಣನು ಈ ಧ್ವನಿಯಿಂದ ವಿಚಲಿತನಾದನು. ಲಂಕೆಯಲ್ಲಿ ಇನ್ನು ಅವನೊಬ್ಬನೆ ಅಲ್ಲದೆ ವೀರರೆಲ್ಲಿ? ಅವನು ತನ್ನ ಚಿನ್ನದ ರಥಕ್ಕೆ ಎಂಟು ಕುದುರೆಗಳನ್ನು ಹೂಡಿ, ಅದನ್ನು ನಾನಾ ಪತಾಕೆಗಳಿಂದ ರಂಜಿಸಿ, ಲಂಕೆಯಲ್ಲುಳಿದ ಯಾವತ್ತು ಸೇನೆಗಳೊಡನೆ, ಭಯಂಕರವಾಗಿ ಕೋಲಾ ಹಲಮಾಡುತ್ತ, ಪಶ್ಚಿಮದ್ವಾರಲ್ಲಿದ್ದ ರಾಮಲಕ್ಷ್ಮಣರೊಡನೆ ಯುದ್ಧ ಮಾಡಲು ಮುಂದೊತ್ತಿ ಬಂದನು.

ಅವನ ಯುದ್ಧವು ಸಾಮಾನ್ಯವಾದುದೇ ? ಮೂರು ಲೋಕಗಳೂ ನಡುಗಿದುವು. ಲಕ್ಷಾವಧಿಯಾಗಿ ಬಾಣಗಳು ಹಾರಾಡಿದುವು. ಅದೇ ಮಹಾಮಾರಿಯಂತಲ್ಲವೆ ? ಬಾಣದ ಕೊನೆಯಲ್ಲಿ ಮೃತ್ಯುವಿದೆ; ಲಕ್ಷ ಗಟ್ಟಲೆಯಾಗಿ ಯೋಧರು ಮಡಿದರು. ಬಹಳ ಹೊತ್ತು ಯುದ್ಧ ನಡೆದರೂ ಜಯವು ಯಾರಿಗೆಂದು ನಿಶ್ಚಯವಾಗಲಿಲ್ಲ.

ಆಗಲೆ ರಾಮನು ದುರ್ಗಾಪೂಜೆಯನ್ನು ಪ್ರಾರಂಭಿಸಿದನು, [ಅದೇ ಶರತ್ಕಾಲವಾದುದರಿಂದ, ಇಂದಿನ ವರೆಗೂ ಶರದೃತುವಿನಲ್ಲಿ ದುರ್ಗಾ

ಪೂಜೆಯನ್ನು ಮಾಡುತಿರುವರು]. ಮೂರು ದಿನಗಳ ತನಕ ಪೂಜೆಯನ್ನು ನಡೆಸಿ ಮಹಾದೇವಿಯ ಪ್ರಸಾದ ಪಡೆದನು. ಅನಂತರ ಮರಳಿ ಯುದ್ಧಕ್ಕಾರಂಭವಾಯಿತು. ಆದರೂ ರಾವಣನು ಸೋಲುವವನಲ್ಲ. ಅವನನ್ನು ಕೊಲ್ಲುವ ಬಾಣವು ಅವನ ಪತಿವ್ರತಾಪತ್ನಿಯಾದ ಮಂಡೋದರಿಯ ಬಳಿಯಲ್ಲಿದ್ದಿತು. ಅದನ್ನು ತರಲು ಹನುಮಂತನು ನಡೆದನು. ಅದು ಒಂದು ಕಲ್ಲಿನ ಕಂಬದಲ್ಲಿದ್ದುದನ್ನು ಅರಿತುಕೊಂಡು, ಕಂಬವನ್ನು ಒಡೆದು, ಹನುಮಂತನು ಆ ಬಾಣವನ್ನು ಕಿತ್ತು, ವಾನರಸೇನೆ ಇದ್ದಲ್ಲಿಗೆ ಓಡಿಯೋಡಿ ಮರಳಿದನು. ಮಂಡೋದರಿಯು ತನ್ನ ಸರ್ವನಾಶವಾಯಿತೆಂದು ಎನ್ನುವುದರೊಳಗೆ, ರಾಮನು ಆ ಮೃತ್ಯುಬಾಣವನ್ನು ಹೂಡಿ ರಾವಣನನ್ನು ಕೊಂದನು. ಅವನು ತ್ರಿಭುವನಗಳ ಅರಸು; ಈಗ ಮಣ್ಣಿನಲ್ಲಿ ಹೊರಳಾಡಿದನು. ಲಂಕೆಯಲ್ಲಿ ಎಲ್ಲೆಲ್ಲಿಯೂ ಹಾಹಾಕಾರವೆದ್ದಿತು. ಆದರೆ ಆಗಲೆ:—

> ತಡೆವವೇ ತಾರೆಗಳು ತರಣಿಯ
> ನಡಸಿ ನುಂಗುವ ರಾಹುವನು ? ಕಡಿ
> ದುಡಿದುಹಾಯಿತು ಸರಳುರಸ್ಥಲವನು ದಶಾನನನ।
> ಹೊಡೆದವಮರರ ಭೇರಿ, ರಾಮನ
> ಮುಡಿಯೊಳಕ್ಕವು ಕುಸುಮವಮರರ
> ಮಡದಿಯರು ಸುಳಿಸಿದರು ಜಯರವಮಂಗಳಾರತಿಯ॥

ರಾವಣನಂತೂ ಮಡಿದನು. ಅವನಿಗೆ ಯೋಗ್ಯವಾದ ಸಂಸ್ಕಾರವನ್ನು ಮಾಡುವುದಕ್ಕಾದರೂ ಯಾರು ಉಳಿದಿರುವರು ? ಪುತ್ರರಿಲ್ಲ, ಪೌತ್ರರಿಲ್ಲ. ಸೋದರನಾದೊಬ್ಬ ವಿಭೀಷಣನು ಮಾತ್ರ ರಾಮನಿಗೆ ಶರಣಾಗತನಾದುದರಿಂದ ಉಳಿದಿರುವನು. ಅವನು ಶೋಕ ಮಾಡುತಿದ್ದುದನ್ನು ರಾಮನು ಕಂಡು, ತಾನೂ ಅವನಿಗಾಗಿ ದುಃಖಗೊಂಡನು. ಬಳಿಕ, ಅವನ ಪಾಪದ ಫಲವನ್ನು ಅವನು ಉಂಡನೆಂದು ವಿಭೀಷಣನಿಗೆ ಸಮಾಧಾನಗೊಳಿಸಿ, ರಾಕ್ಷಸರಲ್ಲಿ ಮಡಿದವರೆಲ್ಲರ ಸಲುವಾಗಿ ಅವನಿಂದಲೇ ಉತ್ತರಕ್ರಿಯೆಗಳನ್ನು ಮಾಡಿಸಿದನು.

ಇನ್ನು ಲಂಕೆಗೆ ಅರಸಾಗುವವರು ಯಾರು ? ವಿಭೀಷಣನಲ್ಲದೆ ಇನ್ಯಾರು ? ಅವನ ಅಭಿಷೇಕವು ಬಹು ವಿಜೃಂಭಣೆಯಿಂದ ಸಾಗಿತು.

ಲಕ್ಷ್ಮಣನು ಅವನ ನೆತ್ತಿಯ ಮೇಲೆ ತೀರ್ಥಗಳನ್ನು ಸುರಿದನು. ಇನ್ನು ಲಂಕೆಗೆ ಧಾರ್ಮಿಕನಾದೊಬ್ಬ ಅರಸು ದೊರೆತನೆಂದು ಪ್ರಜೆಗಳು ಸುಖ ಪಟ್ಟರು.

ರಾಮನು ರಾಜಸಭೆಯಲ್ಲಿ ಓಲಗಂಗೊಟ್ಟು ಕುಳಿತಿರುವನು. ರಾಕ್ಷಸರು ಒಬ್ಬೊಬ್ಬರಾಗಿ ಬಂದು ಅವನ ಕಾಲಿಗೆರಗುತ್ತಿರುವರು. ಆಗ ಸೀತಾದೇವಿಯನ್ನು ಕರೆದುತರಲು ವಿಭೀಷಣನನ್ನು ರಾಮನು ಕಳುಹಿದನು. ಚಿನ್ನದ ರಥವನ್ನು ತೆಗೆದುಕೊಂಡು ಅವನು ಅಶೋಕವನಕ್ಕೆ ತೆರಳಿದನು. ಅವಳು ಆ ರಥವನ್ನು ನೋಡಿ ಆನಂದಪಡೆದಳು. ವಿಭೀಷಣನ ಪತ್ನಿಯಾದ ಸರಮೆಯು ಬಹು ಯತ್ನದಿಂದ ಸೀತಾದೇವಿಯನ್ನು ಸಿಂಗರಿಸಿ ರಥವನ್ನೇರಿಸಿ ರಾಮನ ಬಳಿಗೆ ಕರೆದು ತಂದಳು. ಅವಳನ್ನು ನೋಡಿಯೆ ರಾಮನು ಅತ್ಯಾನಂದವನ್ನು ಹೊಂದಿದನು; ಸೀತೆಯೂ ಆಗ ಅತ್ಯಾನಂದವನ್ನು ಹೊಂದಿದಳು. ಲಕ್ಷ್ಮಣನು ಸೀತಾದೇವಿಯನ್ನು ವಂದಿಸಿ ಸಭೆಗೆ ನಡೆಯಿಸಿ ತಂದನು. ಸೀತೆಯು ಬಾಡಿ ಕುಂದಿದ್ದಳು,

ಹೊಂಪಳಿದ ತನುಲತೆಯು, ಹರುಷದ<br>
ಸೊಂಪು ಸಡಿಲಿದ ಮುಖದ ನೋಟದ<br>
ಗುಂಪುತೆಗೆದಕ್ಷಿಗಳ ಕೋಡಿಯೊಳೊಗುವ ಕಂಬನಿಯ ।<br>
ಕಂಪಿಸುವ ಕರಣಂಗಳಂಜಿಕೆ<br>
ಝೋಂಪಿಸುವ ಮಾನಸದಲಜ್ಜೆಯ<br>
ಕಂಪಿನಂಬುಜವದನೆ ವೈಯಿಕ್ಕಿದಳು ನಿಜಪತಿಗೆ.

ಅವಳು ರಾಮನ ಕಾಲಿಗೆರಗಿ, ತೃಪ್ತಿಹೊಂದಿದಳು. ಆದರೂ ಲಜ್ಜೆಯಿಂದ ರಾಮನ ಒಂದು ಮಗ್ಗುಲಲ್ಲಿ ನಿಂದಳು. ರಾಮನು ಧೀರನೂ ಗಂಭೀರನೂ ಆಗಿ ಕುಳಿತನಲ್ಲದೆ ಒಂದನ್ನೂ ಆಡಿದುದಿಲ್ಲ.

ರಾಮನು ನಿಟ್ಟುಸಿರು ಸುಯ್ದನು. 'ಸೀತೆಯೆ, ಬಹಳ ಕಷ್ಟದಿಂದ ನಿನ್ನನ್ನು ಉದ್ಧರಿಸಿದೆನು. ನಿನ್ನನ್ನು ಕಾಣುವೆನೊ ಇಲ್ಲವೊ ಎಂದು ಸಂದೇಹಗೊಂಡಿದ್ದೆನು. ಆದರೂ ಈಗ ನಾನು ಸುಖಿಯಲ್ಲ. ಇದಿರಲ್ಲಿ ದುಃಖ ಸಾಗರವಿದೆ. ಇಷ್ಟು ಕಾಲ ರಾಕ್ಷಸರ ನಗರದಲ್ಲಿದ್ದೆಯಲ್ಲವೆ? ನಿನ್ನನ್ನು ಹೀಗೆಯೆ ನಾನು ಪರಿಗ್ರಹಿಸಲಾರೆನು. ಹಾಗೆ ಮಾಡಿದೆನಾದರೆ ಮುಂದೆ

ನನ್ನ ಪ್ರಜಾಜನರು ಏನೆನ್ನುವರು? ನಿನ್ನನ್ನು ಧರ್ಮಪರೀಕ್ಷೆಗೊಳಪಡಿಸದೆ ನಿರ್ವಾಹವಿಲ್ಲ' ಎಂದನು.

ಸೀತೆಯು ಎಲುವುಗೂಡಿನಂತಿದ್ದಳು. ಮೊಗವು ಬಾಡಿ ಚಿಕ್ಕದಾಗಿದ್ದಿತು. ಆದರೂ, ಅವಳ ಮುಖದ ಮೇಲೆ ಎಂತಹ ತೇಜಸ್ಸು ಹೊಳೆಯುತ್ತಿದ್ದಿತು! ಅವಳು ಯಾವ ಪರೀಕ್ಷೆಗೂ ಬೆದರುವಳೇಕೆ? ಸ್ವಾಮಿಯ ಪಾದಗಳನ್ನು ನಂಬಿದ ಯಾವಳೂ ಯಾವ ಪರೀಕ್ಷೆಗೂ ಬೆದರುವುದುಂಟೆ? ಪತಿರತೆಯಾದವಳಿಗೆ ಇದರಷ್ಟು ಬಲವನ್ನು ಇನ್ನಾವುದು ತಾನೆ ಕೊಡಲಾಪದು?

ಲಕ್ಷ್ಮಣನು ಬೆಂಕಿಯನ್ನು ಒಂದು ಕುಂಡದಲ್ಲಿ ಪ್ರಜ್ವಲಗೊಳಿಸಿದನು. ಸಭಿಕರೆಲ್ಲರೂ ಭೀತರಾದರು. ಜೀವಿತೆಯಾಗಿರುವ ಸೀತೆಯು ಬೆಂಕಿಯೊಳಕ್ಕೆ ನುಗ್ಗಿ ಮೇಲಕ್ಕೆದ್ದು ಬರುವಳಂತೆ! ಸೀತೆಯು ರಾಮನ ಚರಣಗಳನ್ನು ಏಳು ಬಾರಿ ವಂದಿಸಿದಳು. ಬೆಂಕಿಯೊಳಗೆ ಹಾರಿದಳು. ಎಲ್ಲರೂ ಹಾ—ಹಾ ಎಂದರು. ಅಲ್ಲಿದ್ದ ಹೆಂಗಸರು ಗೋಳಾಡಿದರು. ಸೀತೆಯು ರಾಮನನ್ನು ವಂದಿಸಿ ಅದೇ ಅಗ್ನಿಯಲ್ಲಿ ರಾಮಧ್ಯಾನ ಮಾಡುತಲಿದ್ದಳು! ಉಟ್ಟ ಬಟ್ಟೆಗೂ ಬೆಂಕಿಯ ಉಷ್ಣತೆಯು ತಗಲಲಿಲ್ಲ. ಪ್ರಜಾಜನರು 'ಸೀತಾ ಮಾತೆಗೆ ಜಯವಾಗಲಿ!' ಎಂದು ಜಯಘೋಷವನ್ನು ಮಾಡಿದರು. ರಾಮಲಕ್ಷ್ಮಣರು ಆನಂದಿತರಾದರು. ಸುರಲೋಕದಿಂದ ದಶರಥರಾಯನೇ ಆಗ ವಿಮಾನವನ್ನೇರಿ ಅಲ್ಲಿಗೆ ಬಂದು ಎಲ್ಲರಿಗೂ ಕಾಣಿಸಿಕೊಂಡನು. 'ಸೀತೆಯು ಪರಮಪವಿತ್ರೆ; ಇನ್ನು ಇವಳನ್ನು ಪರಿಗ್ರಹಿಸು' ಎಂದು ಅವನೂ ಹರಸಿ ಆಶೀರ್ವದಿಸಿದನು. ರಾಮನು ತಾನೆ ಎದ್ದು, ತಂದೆಗೆ ತಲೆಬಾಗಿ, ಸೀತಾ ದೇವಿಯನ್ನು ಅಗ್ನಿಕುಂಡದಿಂದ ಎತ್ತಿ, ತನ್ನ ಮಗ್ಗುಲಲ್ಲಿ ಕುಳ್ಳಿರಿಸಿಕೊಂಡನು. ಅವಳೂ ಪತಿಯ ಪ್ರೇಮವನ್ನು ಸಂಪಾದಿಸಿಕೊಂಡು, ಸ್ವರ್ಗಸುಖದ ಅನುಭವ ಹೊಂದಿದಳು. ಇಂತಹ ಪತ್ನಿಯಿರುವುದರಿಂದ ತಾನು ಭಾಗ್ಯವಂತನಾದೆನೆಂದು ರಾಮನೆಂದನು.

ಇನ್ನು ಅಯೋಧ್ಯೆಗೆ ಮರಳುವುದಕ್ಕೆ ಸುಮ್ಮನೆ ವಿಳಂಬವೇತಕ್ಕೆ? ಸೈನ್ಯವು ಸಿದ್ಧವಾಯಿತು. ಎಲ್ಲರೂ ರಥಗಳನ್ನೇರಿದರು. ಗಾಳಿ ಹರಿದಂತೆ

ರಥಗಳು ಓಡಿದುವು. ತನ್ನ ಆಗಮನವನ್ನು ಭರತನಿಗೆ ತಿಳುಹಲು, ಹನು ಮಂತನನ್ನು ಮುಂದಕ್ಕೆ ಕಳುಹಿಕೊಡಲಾಯಿತು.

ಹನುಮಂತನು ಅಯೋಧ್ಯೆಗೆ ಹೋದನು, ಭರತನು ಅಲ್ಲಿಲ್ಲ. ಅವನು ನಂದಿಗ್ರಾಮದಲ್ಲಿ; ಅವನು ಸಭೆಮಾಡಿ ಕುಳ್ಳಿರುವನು. ಹನು ಮಂತನು ಆ ಸಭೆಗೇ ಬಂದನು. ಭರತನನ್ನು ಯಾರು ರಾಜನೆನ್ನ ಬಹುದು? ಅವನು ಸನ್ಯಾಸಿ! ವಸಿಷ್ಠನೂ ನಾರದನೂ ಅವನಿಗೆ ಮಂತ್ರಿ ಗಳು. ಅವನೇ ಮಂತ್ರಿಯ ಆಸನದಲ್ಲಿ ಕುಳ್ಳಿರುವನು. ಸಿಂಹಾಸನದಲ್ಲಿ ಯಾರೂ ಇಲ್ಲ. ಕುಶದ ಆಸನ, ಬಳಿಯಲ್ಲಿ ರಾಜದಂಡ, ಮೇಲೆ ಬೆಳ್ಗೊಡೆ. ರಾಮಚಂದ್ರನು ಬರುವುದನ್ನು ಹನುಮಂತನು ತಿಳುಹಿದನು.

ರಾಮ ಬಂದನು, ಸಕಲಜಗದಭಿ-
ರಾಮ ಬಂದನು, ರಿಪುಗಣೋತ್ಸವ
ಭೀಮ ಬಂದನು, ಜಾನಕಿಯ ನಯನೋತ್ಪಲಾನಂದ ||
ಸೋಮ ಬಂದನು, ಬಂಧುಜನ ಸು-
ಪ್ರೇಮಿ ಬಂದನು, ಶರಣಜನ ವಿ-
ಶ್ರಾಮ ಬಂದನು, ಭರತ! ಚಿತ್ತೈಸೆಂದನಾ ಹನುಮ.

ಸಭಿಕರ ಆನಂದಕ್ಕೆ ಪಾರವೇ ಇಲ್ಲ. ಭರತನು ಸಂತೋಷವಾಗಿ ಹನು ಮಂತನನ್ನು ಅಪ್ಪಿಕೊಂಡನು. ಧಾರಾಳವಾಗಿ ಬಹುಮಾನಗಳನ್ನು ಕೊಟ್ಟನು. ಹನುಮಂತನಿಗೆ ಒಂದೂ ಬೇಡ. ಹನುಮಂತನು ವಾನರನು, ಅನಾರ್ಯನು ಎಂದು ಭರತನು ನೋಡುವನೇ?

ರಾಜ್ಯದಲ್ಲೆಲ್ಲ ಇದೇ ಮಹಾನಂದವು! ಸುಖದ ತುಫಾನು ಎದ್ದಿದೆ! ಪ್ರತಿಯೊಬ್ಬರು ರಾಮಚಂದ್ರನನ್ನು ಕಾಣಲು ಹೊರಟರು. ಅವರಿಗೆ ತವಕ ಬಹಳ.

ರಾಮನೂ ಅತ್ತ ಬರುತಲಿದ್ದನು. ಅವನ ಸಂಗಡವೂ ಸೈನ್ಯಕ್ಕೆ ಮಿತಿಯಿಲ್ಲ. ವಿಭೀಷಣನ ರಾಕ್ಷಸಸೇನೆ, ಸುಗ್ರೀವನ ವಾನರಸೇನೆ! ಎರಡೂ ದಳಗಳು 'ಸೀತಾರಾಮಜಯ, ಜಯಸೀತಾರಾಮ' ಎಂದು ಘೋಷಿಸುತಿವೆ! ಭರತನು ರಾಮನ ರಥದ ಬಳಿ ಸೇರಿದನು. ಅಹ! ಭರತನೆ! ಇಂದಿನ ಭರತನು ಅಂದಿನ ಭರತನೇ ಅಲ್ಲ. ಅವನು ಎಲುವು,

ಚರ್ಮ ಇಷ್ಟೆ ಇದ್ದು ಬಡವಾಗಿರುವನು. ಸರಿಯಾಗಿ ನಡೆಯಲಾರನು. ಅವನ ತಲೆ ಜಡೆ ಕಟ್ಟಿದೆ. ಹನುಮಂತನು ಭರತನನ್ನು ಎತ್ತಿಕೊಂಡು ರಾಮನ ರಥದ ಮೇಲೆ ಇಳಿಸಿದನು. ಅವನೊಡನೆ ಶತ್ರುಘ್ನನಿದ್ದನು. ಭರತನು ರಾಮನನ್ನು ವಂದಿಸಿ, ಲಕ್ಷ್ಮಣನನ್ನು ಆಲಿಂಗಿಸಿದನು. ಅವರು ಹರ್ಷಗೊಂಡು ಕಣ್ಣೀರು ಮಿಡಿದರು.

ರಾಮಚಂದ್ರನು ಬ್ರಾಹ್ಮಣರನ್ನು ವಂದಿಸಿ, ತಾಯಂದಿರಿಗೆ ತಲೆ ಬಾಗಿದನು. ಎಲ್ಲರೂ ಆಶೀರ್ವದಿಸಿದರು. ಸೀತೆಯೂ ಅದರಂತೆ ಎಲ್ಲರನ್ನು ಪ್ರಣಮಿಸಿದಳು. ಅವಳನ್ನು ಕಂಡವರು ಅತ್ತರು. ರಾಮನು 'ದೇವಿಯರೆ, ನಿಮ್ಮ ಪ್ರಾಣದ ಲಕ್ಷ್ಮಣನು ಇಲ್ಲಿರುವನು' ಎಂದು ಸುಮಿತ್ರೆಯ ಕಾಲ್ಗೆರಗಿ, ಲಕ್ಷ್ಮಣನನ್ನು ಒಪ್ಪಿಸಿದನು. ಲಕ್ಷ್ಮಣನು ತನಗಾಗಿ ಸಹಿಸಿದ ಸಂಕಷ್ಟ ಪರಂಪರೆಗಳನ್ನು ಹೇಳಿ, ಅಂತಹ ಸೋದರನು ಇನ್ನೆಲ್ಲಿಯೂ ಇಲ್ಲವೆಂದನು. ಅಣ್ಣನ ವಿಪತ್ತು ಲಕ್ಷ್ಮಣನಿಗೆ ಸಂಪತ್ತು ಎಂದು ಅವಳೆಂದಳು.

ಇನ್ನು ರಾಮನ ಪಾದುಕೆಗಳನ್ನು ತಲೆಯಲ್ಲಿ ಧರಿಸಿದ್ದ ಭರತನು, ಅವುಗಳನ್ನು ರಾಮನ ಚರಣಗಳ ಬಳಿಯಲ್ಲಿ ಇರಿಸಿದನು. 'ಅಣ್ಣಾ, ನಾನು ಇವೇ ಹದಿನಾಲ್ಕು ವರ್ಷ ಈ ಪಾದುಕೆಗಳ ಸೇವೆಯನ್ನು ಮಾಡಿರುವೆನು. ಇಂದಿಗೆ ನನ್ನ ಆ ವ್ರತವು ಸಾಂಗವಾಗಿ ಮುಗಿದಿದೆ. ಈ ಪಾದುಕೆಗಳನ್ನು ಕಂಡೇ ಪ್ರಜೆಗಳೆಲ್ಲರೂ ವಿಧೇಯರಾಗಿದ್ದು ಸುಖಗೊಂಡಿದ್ದರು. ಇನ್ನು ಇವುಗಳನ್ನು ಮೆಟ್ಟಿಕೊಂಡು ನಮಗೆಲ್ಲ ಆನಂದವನ್ನು ಉಂಟುಮಾಡಬೇಕು. ಇನ್ನು ಮಹಾರಾಜರಾದ ತಮ್ಮ ಪಾದಾರವಿಂದಗಳೇ ಇಲ್ಲಿರುವಾಗ, ನಮಗೆ ಆ ಪಾದುಕೆಗಳೇಕೆ?' ಎಂದು ಭರತನು ನುಡಿದನು.

ರಾಮನು ಈ ಪಾದುಕೆಗಳನ್ನು ಕಾಲಿಗೆ ಸಿಕ್ಕಿಸಿಕೊಂಡನು. ಆಗಲೇ—'ಜಯ ಸೀತಾರಾಮ!' ಎಂದು ಧ್ವನಿಯೆದ್ದಿತು. ಅಲ್ಲಿಂದ ಆ ಮೆರವಣಿಗೆಯು ಅಯೋಧ್ಯೆಗೆ ಮುಂದರಿಸಿತು. ರಾಮನು ಅಯೋಧ್ಯೆಗೆ ಬಂದವನೇ ಮೊದಲಾಗಿ ಕೈಕೇಯಿಯನ್ನೇ ಕಂಡು ತಲೆಬಾಗಿದನು. ಅವಳ ದುಃಖವು ಅಷ್ಟಿಷ್ಟಲ್ಲ, ನಾಚುಗೆಗೆ ಕಡಿಮೆಯಿಲ್ಲ; ಅವಳು ಮಾತೆತ್ತಲಿಲ್ಲ; ತನ್ನ ತಪ್ಪನ್ನು ನೆನೆದು ಅವಳು ಪಶ್ಚಾತ್ತಾಪಗೊಂಡಿರುವಳು. ರಾಮನೇ

ಅವಳಿಗೆ ಸಮಾಧಾನ ಹೇಳಿದನು. ಹಿಂದಣ ವೃತ್ತಾಂತವನ್ನು ಮರೆಯು ಬೇಕೆಂದು ಎಷ್ಟೋ ಸಲ ಬೇಡಿಕೊಂಡನು. ರಾಮವಾಕ್ಯಗಳನ್ನು ಕೇಳಿ ಕೈಕೇಯಿಯು ಅವನನ್ನು ಆಶೀರ್ವದಿಸಿದಳು.

ರಾಜಸಭೆಯು ಸೇರಿತು. ವಾದ್ಯಗಳು ಮೊಳಗಿದುವು. ಸೀತಾ-ರಾಮರಿಗೆ ಉಚ್ಚ ಸಿಂಹಾಸನವು. ಆಗ ಭರತನು ಎದ್ದು ನಿಂತುಕೊಂಡನು. 'ನಾನು ರಾಮದಾಸನು. ಆತನ ಆಜ್ಞಾನುಸಾರವಾಗಿ ನನ್ನ ಕೈಯಲ್ಲಿ ರಾಜ್ಯಭಾರವು ಇದ್ದಿತು. ಆತನು ಹದಿನಾಲ್ಕು ಸಂವತ್ಸರಗಳೂ ವನವಾಸ ದಲ್ಲಿದ್ದಾಗ, ನಾನು ಆತನ ಚರಣಗಳ ಹೆಸರಿನಲ್ಲಿ ರಾಜ್ಯವನ್ನಾಳಿದೆನು. ಇಂದು ಆತನೇ ರಾಜ್ಯಭಾರವನ್ನು ವಹಿಸಿಕೊಂಡಿರುವನು. ಇನ್ನು ನಾನು ನಿಶ್ಚಿಂತನಾಗಿರುವೆನು' ಎಂದು ಭರತನು ಸಭೆಗೆ ಹೇಳಿಕೊಂಡನು.

ಶುಭಲಗ್ನದಲ್ಲಿ ಸೀತಾ-ರಾಮರಿಗೆ ಪಟ್ಟಾಭಿಷೇಕವಾಯಿತು. ಏಳು ಸಾಗರಗಳ ಏಳುನೂರು ನದಿಗಳ ತೀರ್ಥವನ್ನು ತರಿಸಿ, ಅವರನ್ನು ಅಭಿ ಷೇಕಿಸಿದರು. ರಾಜ್ಯದಲ್ಲೆಲ್ಲರೂ ಸುಖಿಗಳು. ರಾಜ್ಯದಲ್ಲಿ ಜಯಧ್ವನಿಗಳು ಮೊಳಗಿದುವು.

ರಾಮನು ರಾಜ್ಯಭಾರವನ್ನು ಮಾಡಲು ತೊಡಗಿದನು. ಬಹು ಕಾಲದ ಆ ರಾಜ್ಯಭಾರವು ಎಷ್ಟು ಚೆನ್ನಾಗಿದ್ದಿತೆಂದರೆ,—ಅತ್ಯುತ್ತಮ ರಾಜ್ಯಕ್ಕೆ ಇಂದಿನ ವರೆಗೆ 'ರಾಮರಾಜ್ಯ'ವೆಂದು ಹೋಲಿಸಿ ಕರೆವುದುಂಟು. ಅದೆಲ್ಲವನ್ನು ಬಣ್ಣಿಸಿ ಇಷ್ಟರಲ್ಲೆ ಮುಗಿಸಲಾಗುವುದಿಲ್ಲ. ಇಂತಹ ಅಪೂರ್ವ ಚರಿತ್ರನಾಯಕನು ಭಾರತವರ್ಷದಲ್ಲಿ ರಾಮನೊಬ್ಬನೇ. ಅವನ ಸಾಹಸ, ಅವನ ಗುಣಾತಿಶಯ, ಅವನ ಆಳಿಕೆ,—ಇವುಗಳಿಂದಲೆ ಅವನು ಭಗವಂತ ನಂತೆ ಹಿಂದೂಚರಿತ್ರೆಯಲ್ಲಿ ತೋರುತಿರುವನು. ಸೇತುವಿನಿಂದ ಹಿಮಾ ಚಲದ ವರೆಗೆ ಭಗವಂತನಿಗೆ ಜಯವಾಗಲೆನ್ನುವ ಅರ್ಥದಲ್ಲಿ, ಈಗಲೂ ಹೇಳುವರು,—ಜಯ ಸೀತಾರಾಮ !

